ಸ್ಕೌಟ್ ಶತಮಾನೋತ್ಸವ - 2007
Price Rs. 3.00/- per copy only




# ಕರ್ನಾಟಕ ಸ್ಕೌಟ್ ಮತ್ತು ಗೈಡ್ಸ್ ವಾರ್ತಾ ಪತ್ರಿಕೆ

# Karnataka Scout & Guide News Magazine

VOL. - 7 NOVEMBER NO. - 10




ಕರ್ನಾಟಕ ಸರ್ಕಾರದ ಘನವೆತ್ತ ರಾಜ್ಯಪಾಲರ ಸಲಹಾಗಾರರಾದ ಶ್ರೀ ಪಿ.ಕೆ. ಹೆಚ್, ತಾರಕನ್‌ರವರು ದಿನಾಂಕ 7-11-2007ರಂದು ಬೆಂಗಳೂರು ವಿಧಾನಸೌಧದ 3ನೇ ಮಹಡಿಯ 313ನೇ ಕೊಠಡಿಯಲ್ಲಿ ಸ್ಥಾಪನಾ ದಿನದ ಧ್ವಜ (ಫೌಂಡೇಷನ್ ಡೇ ಫ್ಲಾಗ್)ನ್ನು ಬಿಡುಗಡೆ ಮಾಡಿದರು. ಕರ್ನಾಟಕ ಸರ್ಕಾರದ ಕ್ರೀಡಾ ಮತ್ತು ಯುವಜನ ಸೇವಾ ಇಲಾಖೆಯ ಮಾನ್ಯ ಕಾರ್ಯದರ್ಶಿಗಳಾದಶ್ರೀ ಎ.ಎಸ್. ಶ್ರೀಕಾಂತ್, ರಾಜ್ಯ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಮಾನ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು, ಸಾರ್ವಜನಿಕ ಶಿಕ್ಷಣ ಇಲಾಖೆ(ಸೆಕೆಂಡರಿ) ನಿರ್ದೇಶಕರಾದ ಶ್ರೀ ಚಿದ್ರೆ ಶಂಕರಯ್ಯ ಹಾಗೂ ಸ್ಕೌಟ್ ಮತ್ತು ಗೈಡ್ಸ್ ಗಳು ಸಹ ಹಾಜರಿರುವುದನ್ನು ಕಾಣಬಹುದು.





ಹರಿಹರ ವಿಧಾನ ಸಭಾ ಕ್ಷೇತ್ರದ ಮಾನ್ಯ ಶಾಸಕರಾದ ಡಾ॥ ವೈ. ನಾಗಪ್ಪನವರು ಕೊಂಡಜ್ಜಿ ಶಿಬಿರದಲ್ಲಿ ನೂತನವಾಗಿ ನಿರ್ಮಾಣಗೊಂಡಿರುವ ವಾಚನಾಲಯದ ಕೊಠಡಿಯನ್ನು ಉದ್ಘಾಟಿಸುತ್ತಿರುವುದು. ರಾಜ್ಯ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಮಾನ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು, ದಾವಣಗೆರೆ ಜಿ.ಮು.ಆ.ರಾದ, ಶ್ರೀ ಜಂಬಗಿ ಶರಣಪ್ಪನವರು ಹಾಗೂ ಇತರರು ಹಾಜರಿರುವುದನ್ನು ಕಾಣಬಹುದು.





ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ಪ್ರಕಟಣಾ ಸಮಿತಿ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ಕೊಂಡಜ್ಜಿಯಲ್ಲಿ ದಿನಾಂಕ 14-11-2007ರಂದು ದಿ.ಕೊಂಡಜ್ಜಿ ಬಸಪ್ಪನವರ ಜೀವನ ಗಾಥೆಯನ್ನು ಅಭಿವ್ಯಕ್ತಿಸುವ ' ಕೊಂಡಜ್ಜಿ ' (ಎರಡನೇ ಮುದ್ರಣದ) ಕೃತಿಯನ್ನು ಬಿಡುಗಡೆಗೊಳಿಸುತ್ತಿರುವುದು.



ರಾಜ್ಯದ ಮಾನ್ಯ ಸ್ಕೌಟ್ ಆಯುಕ್ತರಾದ ಶ್ರೀ ಸಿ.ಆರ್. ಮಹಮದ್ ಜಹಿರುದ್ದೀನ್‌ರವರು ಕೊಂಡಜ್ಜಿಯಲ್ಲಿ ದಿನಾಂಕ 12-11-2007ರಂದು ಸ್ಕೌಟ್ ಮತ್ತು ಗೈಡ್ಸ್‌ನ ರಾಜ್ಯ ಪುರಸ್ಕಾರ ಶಿಬಿರದ ಪ್ರಾರಂಭೋತ್ಸವ ಸಮಾರಂಭವನ್ನು ಉದ್ಘಾಟಿಸುತ್ತಿರುವುದು. ದಾವಣಗೆರೆ ಜಿಲ್ಲಾ ಪಂಚಾಯಿತಿ ಸದಸ್ಯರಾದ ಶ್ರೀಮತಿ ಸರೋಜಮ್ಮ ಮಹಂತೇಶ್, ತಾಲ್ಲೂಕು ಪಂಚಾಯಿತಿ ಸದಸ್ಯರಾದ ಶ್ರೀಮತಿ ಸೌಭಾಗ್ಯಮ್ಮ ಮುದೇಗೌಡಪ್ಪ ಹಾಗೂ ಇತರರು ಹಾಜರಿರುವುದನ್ನು ಕಾಣಬಹುದು.



ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ ಹಾಗೂ ಗೈಡ್‌ಗಳು




Vol - 7 November - 2007 No. 10



## ಪರಿವಿಡಿ

# ಸಮಸ್ತರಿಗೂ ಕ್ರಿಸ್‌ಮಸ್ ಮತ್ತು ನೂತನ ವರ್ಷದ ಶುಭಾಶಯಗಳು

## ರಾಜ್ಯ ಮುಖ್ಯ ಆಯುಕ್ತರ ನುಡಿ.................................................................

ಮಾನ್ಯರೆ,

ಪ್ರತಿವರ್ಷ ನವೆಂಬರ್ 7, ಭಾರತ್ ಸ್ಕೌಟ್ಸ್ ಸಂಸ್ಥೆ ಮತ್ತು ಗೈಡ್ಸ್ ರಾಷ್ಟ್ರಾದ್ಯಂತ "ಸಂಸ್ಥಾಪನಾದಿನ"ವನ್ನಾಗಿ ಆಚರಿಸಲಾಗುತ್ತದೆ. ರಾಜ್ಯ ಸಂಸ್ಥೆಯು ದಿನಾಂಕ 7 ನವೆಂಬರ್, 2007 ರಂದು "ಸಂಸ್ಥಾಪನಾದಿನ" ಹಾಗೂ "ಧ್ವಜ ಬಿಡುಗಡೆ" ಸಮಾರಂಭವನ್ನು ವಿಧಾನಸೌಧದ ಸಮಿತಿ ಸಭಾಂಗಣದಲ್ಲಿ ಏರ್ಪಡಿಸಲಾಗಿತ್ತು. ಕರ್ನಾಟಕದ ಗೌರವಾನ್ವಿತ ರಾಜ್ಯಪಾಲರ ಸಲಹೆಗಾರರಾದ ಶ್ರೀ ಪಿ.ಕೆ.ಹೆಚ್. ತಾರಕನ್‌ರವರು "ಸಂಸ್ಥಾಪನಾದಿನ ಧ್ವಜ" ಬಿಡುಗಡೆ ಗೊಳಿಸಿ, ಸ್ಕೌಟ್-ಗೈಡ್ ಚಳವಳಿ ರಾಜ್ಯದ ಎಲ್ಲಾ ಶಾಲೆಗಳಿಗೂ ವಿಸ್ತರಿಸುವುದು ಅವಶ್ಯಕ ಎಂದು ಕರೆ ನೀಡಿದರು.

ರಾಷ್ಟ್ರೀಯ ಸಂಸ್ಥೆಯವರು ಹೊರತಂದಿದ್ದ "ಧ್ವಜವನ್ನು" ಬಿಡುಗಡೆಗೊಳಿಸಿ, ಚಳವಳಿಯ ಆದರ್ಶ ಹಾಗೂ ಚಿಂತನೆಗಳು ಹೆಚ್ಚು ಹೆಚ್ಚು ಯುವಜನರನ್ನು ಆಕರ್ಷಿಸಬೇಕೆಂದು ಆಶಿಸಿದರು. ಯುವಜನ ಸೇವಾ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಎ.ಎಸ್. ಶ್ರೀಕಾಂತ್, ಸಾರ್ವಜನಿಕ ಶಿಕ್ಷಣ ಇಲಾಖೆ ನಿರ್ದೇಶಕರಾದ ಶ್ರೀ ಶಂಕರಯ್ಯಸ್ವಾಮಿ ಚಿದ್ರೆ ಹಾಗೂ ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಭಾಗವಹಿಸಿದ್ದರು. ವಿವರಗಳನ್ನು ಪ್ರತ್ಯೇಕವಾಗಿ ಪ್ರಕಟಿಸಿದೆ.

ದಿನಾಂಕ 7 ರಂದು ಬೆಂಗಳೂರಿನ ದೊಮ್ಲೂರ್ ಬಡಾವಣೆಯ ಲಿಟಲ್ ಏಂಜಲ್ಸ್ ಮಾದರಿ ಹೈಸ್ಕೂಲ್‌ನ ವಾರ್ಷಿಕ ಕ್ರೀಡಾ ಕೂಟದಲ್ಲಿ ಭಾಗವಹಿಸಿ, ಶಾಲೆಯ ಹೆಚ್ಚಿನ ವಿದ್ಯಾರ್ಥಿಗಳನ್ನು ಸ್ಕೌಟ್-ಗೈಡ್ ದಳಕ್ಕೆ ಸೇರಲು ಕೋರಿದ್ದೇನೆ. ಈ ಶಾಲೆಯ ಸಂಸ್ಥಾಪಕರಲ್ಲಿ ನಮ್ಮ ರಾಷ್ಟ್ರೀಯ ಆಯುಕ್ತರಾಗಿದ್ದ, ಶ್ರೀ ವಿ.ಪಿ. ದೀನದಯಾಳು ನಾಯ್ಡು ಪ್ರಮುಖರು. ಸಂಸ್ಥೆಯ ಕಾರ್ಯದರ್ಶಿ ಹಾಗೂ ನಮ್ಮ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವ ಶ್ರೀ ಡಿ. ವೆಂಕಟೇಶ್ ಅವರು ಕಾರ್ಯಕ್ರಮದಲ್ಲಿ ಶಾಲೆಯ ಅಭಿವೃದ್ಧಿಯಲ್ಲಿ ತೊಡಗಿಸಿಕೊಂಡಿರುವುದು ಅಭಿನಂದನೀಯ. ಸಂಸ್ಥೆ ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಲಿ ಎಂದು ಆಶಿಸುತ್ತೇನೆ.

ದಿನಾಂಕ 11-11-2007ರಂದು ಡಾ. ಅನಿಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರಕ್ಕೆ ಕರ್ನಾಟಕದ ಘನತೆವೆತ್ತ ರಾಜ್ಯಪಾಲರೂ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಷ್ಟ್ರೀಯ ಅಧ್ಯಕ್ಷರೂ, ರಾಜ್ಯ ಸಂಸ್ಥೆಯ ಗೌರವಾನ್ವಿತ ಪೋಷಕರಾದ ಶ್ರೀರಾಮೇಶ್ವರ ಠಾಕೂರ್ ಅವರು ಆಗಮಿಸಿ, ಸಾರ್ವಜನಿಕ ಶಿಕ್ಷಣ ಇಲಾಖೆ ಏರ್ಪಡಿಸಿದ್ದ ರಾಜ್ಯ ಮಟ್ಟದ "ಪ್ರತಿಭಾಕಾರಂಜಿ" ಕಾರ್ಯಕ್ರಮವನ್ನು ಉದ್ಘಾಟಿಸಿದರು. ರಾಜ್ಯದ ಎಲ್ಲಾ ಜಿಲ್ಲೆಗಳಿಂದ 2500ಕ್ಕೂ ಹೆಚ್ಚಿನ ಹೈಸ್ಕೂಲ್ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಗೌರವಾನ್ವಿತ ರಾಜ್ಯಪಾಲರು "ಪ್ರತಿಭಾಕಾರಂಜಿ" ಕಾರ್ಯಕ್ರಮ ಉದ್ಘಾಟಿಸಿ, ಇಂತಹ ಕಾರ್ಯಕ್ರಮಗಳು ಯುವಪ್ರತಿಭೆಗಳಿಗೆ ವಿಪುಲ ಅವಕಾಶ ಒದಗಿಸುವುದೆಂದು ಆಶಿಸಿದರು. ತಾವು ಈ ಶಿಬಿರಕ್ಕೆ ಹಿಂದೆರೆಡು ಭಾರಿ ಭೇಟಿ ನೀಡಿದ್ದು, ಸ್ಕೌಟ್ಸ್-ಗೈಡ್ ಸಂಸ್ಥೆಯಲ್ಲಿ ಹಲವಾರು ದಶಕಗಳಿಂದ ತಾವು ಕಾರ್ಯನಿರ್ವಹಿಸುತ್ತಿದ್ದು ಮತ್ತೊಮ್ಮೆ ಬೆಸೆಂಟ್ ಪಾರ್ಕ್‌ಗೆ ಭೇಟಿ ನೀಡಿ ಯುವಕರ ಪ್ರತಿಭೆಗಳನ್ನು ತಾವು ಮತ್ತು ತಮ್ಮ ಶ್ರೀಮತಿಯವರು ವೀಕ್ಷಿಸಲು ಅವಕಾಶವಾದದ್ದಕ್ಕೆ ಸಂತಸ ವ್ಯಕ್ತಪಡಿಸಿದರು. ಪ್ರೌಢ ಮತ್ತು ಪ್ರಾಥಮಿಕ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಎಂ. ವಿಜಯಭಾಸ್ಕರ್, ಇಲಾಖೆಯ ಆಯುಕ್ತರಾದ ಶ್ರೀ ಜಿ. ಕುಮಾರನಾಯಕ್, ಪ್ರೌಢ ಶಿಕ್ಷಣ ನಿರ್ದೇಶಕರಾದ ಶ್ರೀ ಶಂಕರಯ್ಯಸ್ವಾಮಿ ಚಿದ್ರೆ, ಜಂಟಿ ನಿರ್ದೇಶಕರಾದ ಶ್ರೀಮತಿ ಎಸ್.ಎನ್. ಪ್ರತಿಮಾ ಬೆಂಗಳೂರು ಗ್ರಾಮಾಂತರ ಜಿಲ್ಲಾ ಉಪನಿರ್ದೇಶಕರಾದ ಶ್ರೀ ಕೆ.ಆರ್. ಶ್ರೀನಿವಾಸಲು ಹಾಗೂ ಇಲಾಖೆಯ ಹಿರಿಯ ಅಧಿಕಾರಿಗಳು, ಸಾರ್ವಜನಿಕರು, ಪತ್ರಿಕಾ ಮಾಧ್ಯಮದವರು, ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ರಾಜ್ಯ ಸಂಸ್ಥೆಯಿಂದ ನಾನು ಮತ್ತು ಜಂಟಿ ರಾಜ್ಯ ಕಾರ್ಯದರ್ಶಿಗಳು, ರಾಜ್ಯ

ಸಹಾಯಕ ಆಯುಕ್ತರುಗಳು, ಸ್ಥಾನಿಕ ಆಯುಕ್ತರುಗಳು, ಕಾರ್ಯಕಾರಿ ಸಮಿತಿ ಸದಸ್ಯರುಗಳು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು, ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಸಮಾರಂಭಕ್ಕೆ ಶೋಭೆತಂದರು.

6ನೇ ರಾಜ್ಯ ಮಟ್ಟದ "ಪ್ರತಿಭಾಕಾರಂಜಿ" ಕಾರ್ಯಕ್ರಮವನ್ನು ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಏರ್ಪಡಿಸಿದ್ದಕ್ಕೆ ರಾಜ್ಯ ಸಂಸ್ಥೆಯ ಪರವಾಗಿ ಮಾನ್ಯ ಆಯುಕ್ತರಾದ ಶ್ರೀ ಜಿ. ಕುಮಾರನಾಯಕ್ ಹಾಗೂ ಪ್ರೌಢ ಶಿಕ್ಷಣ ನಿರ್ದೇಶಕರಾದ ಶ್ರೀ ಶಂಕರಯ್ಯಸ್ವಾಮಿ ಚಿದ್ರೆ ಅವರಿಗೆ ಸಂಸ್ಥೆಯ ಹೃತ್ಪೂರ್ವಕ ಧನ್ಯವಾದಗಳು.

ದಿನಾಂಕ 12 ರಿಂದ 16 ನವೆಂಬರ್‌ವರೆಗೆ ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ಜರುಗಿದ ಪೂರ್ವಭಾವಿ ತರಬೇತಿ ಶಿಬಿರದ ಉದ್ಘಾಟನೆ ಹಾಗೂ ಸಮಾರೋಪಗಳು ಜರುಗಿತು. ದಿನಾಂಕ 14 ನವೆಂಬರ್ 2007 ರಂದು ಶಿಬಿರದಲ್ಲಿ "ಕೊಂಡಜ್ಜಿ ಬಸಪ್ಪ ಸ್ಮರಣೆ", "ಮಕ್ಕಳ ದಿನಾಚರಣೆ" ಹಾಗೂ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮ ಜರುಗಿತು. ಕಾರ್ಯಕ್ರಮದ ವಿವರಗಳನ್ನು ಸಚಿತ್ರವಾಗಿ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ. ರಾಜ್ಯದ ಹಿರಿಯ ಜಾನಪದ ತಜ್ಞರೂ, ಸಮಾಜ ಮುಖಿಗಳೂ, ರಾಜ್ಯ ಸಂಸ್ಥೆಯ ಟ್ರಸ್ಟಿ, ಸಂಸ್ಥೆಯ ಪ್ರಕಟಣೆಗಳ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಅವರು ಮುಖ್ಯ ಅತಿಥಿಯಾಗಿ ಭಾಗವಹಿಸಿ, ಸ್ಕೌಟ್-ಗೈಡ್‌ಗಳಿಗೆ ಅವಶ್ಯಕವಾದ ವಿವರಗಳನ್ನು ನೀಡಿದ್ದಲ್ಲದೆ, ಚಳವಳಿಯ ಹೆಜ್ಜೆಗಳು ವಿಪುಲವಾಗಿ ಹಬ್ಬುವ ಅವಶ್ಯಕತೆ ಹಿಂದಿಗಿಂತಲೂ ಇಂದು ಹೆಚ್ಚಿದೆ ಎಂದರು. ಕೊಂಡಜ್ಜಿ ಬಸಪ್ಪನವರ ಆದರ್ಶ-ಚಿಂತನೆಗಳು ಇಂದಿನ ಯುವಜನತೆಗೆ ಆದರ್ಶವಾಗಲೆಂದು ಕರೆ ನೀಡಿದರು.

ಸಂಜೆಯ ಮುಕ್ತಾಯ ಸಮಾರಂಭದಲ್ಲಿ ರಾಜ್ಯದ ಮಾಜಿ ಸಚಿವರೂ, ಹರಿಹರ ಕ್ಷೇತ್ರದ ಮಾನ್ಯ ಶಾಸಕರಾದ ಡಾ. ವೈ. ನಾಗಪ್ಪ ಅವರು ತಮ್ಮ ಸ್ಥಳೀಯ ಅಭಿವೃದ್ಧಿ ನಿಧಿಯಿಂದ ನೀಡಿರುವ ರೂ. 5 ಲಕ್ಷಗಳ ಹಣದಲ್ಲಿ ನಿರ್ಮಿಸಿರುವ ಗ್ರಂಥಾಲಯ ಕೊಠಡಿಗಳ ಉದ್ಘಾಟನೆಯನ್ನು ನೆರವೇರಿಸಿ, ಇಂತಹ ಯುವ ಚಳವಳಿ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಪ್ರಾರಂಭಿಸಬೇಕೆಂದು ಕರೆ ನೀಡಿದರು. ತಾವು ಶಾಖೆಯಲ್ಲಿ ಸ್ಕೌಟ್ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದನ್ನು ನೆನಪಿಸಿದರು. ಕೊಂಡಜ್ಜಿ ಗ್ರಾಮ ಪಂಚಾಯತ್ ಅಧ್ಯಕ್ಷ ಶ್ರೀ ಒ. ವೀರಭದ್ರಪ್ಪ, ಸದಸ್ಯರುಗಳಾದ ಶ್ರೀಮತಿ ಸರ್ವಮಂಗಳಮ್ಮ ಬಸವರಾಜಪ್ಪ, ಶ್ರೀ ಹನುಮಂತಪ್ಪ, ಶ್ರೀಮುದೇಗೌಡಪ್ಪ, ಶ್ರೀ ಗೌಡ್ರ ಸಂಗಪ್ಪ ಹಾಗೂ ಊರಿನ ಗಣ್ಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಶ್ರೀ ಮರುಳಸಿದ್ದೇಶ್ವರ ಭಜನಾ ಮಂಡಳಿ ಸದಸ್ಯರು ಹಾಗೂ ಶ್ರೀ ಮಾರುತಿ ಬ್ಯಾಂಡ್‌ಸೆಟ್ ತಂಡದವರು ಅತಿಥಿಗಳನ್ನು ಭಜನೆ ಹಾಗೂ ವಾದ್ಯಗಳಿಂದ ಸ್ವಾಗತಿಸಿದರು.

ತಮಗೆ ತಿಳಿದಿರುವಂತೆ ವಿಶ್ವ ಸ್ಕೌಟ್ ಶತಮಾನೋತ್ಸವ ರ್‍ಯಾಲಿಗಳು, ಕಾರ್ಯಕ್ರಮಗಳು ಹಲವಾರು ಜಿಲ್ಲೆಗಳಲ್ಲಿ ಜರುಗಬೇಕಾಗಿದೆ. ಹಲವಾರು ಜಿಲ್ಲೆಗಳಲ್ಲಿ ಈ ವರ್ಷ ಮೂಲ ಹಾಗೂ ಮುಂದುವರೆದ ತರಬೇತಿ ಆಗಬೇಕಾಗಿದೆ. ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದ ರ್‍ಯಾಲಿಗಳು ನಡೆಯಬೇಕಾಗಿವೆ. ದಳ, ಸ್ಥಳೀಯ, ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳಲ್ಲಿ ನನ್ನ ಕೋರಿಕೆ ಏನೆಂದರೆ, ಸಂಸ್ಥೆಯ ಚಟುವಟಿಕೆಗಳನ್ನು ಸಕ್ರಿಯಗೊಳಿಸುವುದಲ್ಲದೇ, ತಾವು ಹಾಗೂ ಇತರ ಸಹೋದ್ಯೋಗಿಗಳು ಹೆಚ್ಚು ಕಾರ್ಯಪ್ರವರ್ತರಾಗಬೇಕೆಂದು ಕೋರುತ್ತೇನೆ. ಉತ್ತಮ ಮೌಲ್ಯ-ಆದರ್ಶ-ಚಿಂತನೆಗಳನ್ನು ಯುವ ಸಮುದಾಯಕ್ಕೆ ತಲುಪಿಸುವ ಗುರುತರ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ಈ ಪ್ರಯತ್ನದಲ್ಲಿ ಭಾಗವಂತನ ಕೃಪೆ ನಮ್ಮಗಳೆಲ್ಲರ ಮೇಲಿರಲಿ ಎಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# BS&G observed Flag Day on 7th Nov' 2007 at Vidhana Soudha

## Sri P.K.H. Tharakan, Advisor to the Governor Released the Foundation Day Flag

*Many great Leaders like Mahatma Gandhi, Pandit Jawaharlal Nehru, Dr. Annie Besant and other Top Leaders of the Nation have been patronizing the Movement till date. As a result of their efforts, the Bharat Scouts and Guides was formed on 7th November 1950 after merging various different Scout Organizations and Girl Guide Associations which were earlier working separately with a Common Spirit and Goal prior to Independence. 7th November is thus a Memorable Day in the History of Scouting and Guiding Movement is India, on this date, the "Flag Day" is celebrated.*

*The Aim of 'Flag Day' is to spread the message of Scouting and Guiding to All Sections of the Society and to the parents and Educational Institutions.*

*Sri P.K.H. THARAKAN, IPS (Retd) Advisor to the Governor of Karnataka released the Foundation Day Flag on 7th November 2007 at Committee Room, Vidhana Soudha, Bangalore. In his address he said more and more young Children should join the Movement and it should reach Schools throughout Karnataka. He desired that such Youth Movements should grow and discipline and service concept should be inculcated among the Youth.*

*Sri A.S. Srikanth, Secretary to Govt, Dept of Youth Services and Sports, Sri Chidre Shankaraiah Swamy, Director of Public Instruction (Secondary), Sri Kondajji B. Shanmukhappa, State Chief Commissioner, Officials from the State Headquarters and the District Headguarters, Scouts & Guides, Rovers, Rangers were present in large numbers.*

# Scouts & Guides Participated in the "National Disaster Reduction Day Rally"

## Organised by the Directorate of Home Guards, Civil Defence, Fire & Emergency Services, Govt. of Karnataka

*Scouts and Guides from **Mount Senerio High School, Swathanthrayodha Nagar, Laggere, Bangalore, Gayathri Guide Company, Bangalore** and Scouts from **Seshadripuram High School participated** in the National Disaster Reduction Day Rally held on 17th Nov 2007 at Grand Stairs, of Vidhana Soudha, Bangalore.*

*Sri K.R. Srinivasan, IPS, Director General and Inspector General of Police, Karnataka Flagged Off the Rally. Smt. Jija Harising, IPS, Director General of Police and Commandant General, Home Guards, Director Civil Defence, Fire and Emergency Service, Officials from Police, Homeguards, BSF, Fire Services were also present.*

*Sri. N. Srinivasan, Joint State Secretary (S), Sri M.A. Chellaiah, Headquarters Commissioner (Publication), Sir K. Thimmappa, Headquarters Commissioner (Training), Sri Ramamurthy, Scout Master and Sri Satyanavarayana, Scout Master attended the Rally.*

*Sri Rameshwara Thakur, His Excellency the Governor of Karnataka and the President, the Bharat Scouts and Guides, India was the Chief Guest at the Observance of National Disaster Reduction Day Celebration held on 17-11-2007 at Field Marshal Manekshaw Parade Grounds, Cubbon Road, Bangalore.*

*Scouts and Guides in large members attended the function along with other Uniformed forces.*

# ಕೊಂಡಜ್ಜಿಯಲ್ಲಿ ರಾಜ್ಯ ಪುರಸ್ಕಾರ ಪೂರ್ವಭಾವಿ ಸಿದ್ಧತಾ ಶಿಬಿರ

ದಿನಾಂಕ 12-11-2007 ರಿಂದ 16-11-2007ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ, ಕೊಂಡಜ್ಜಿಯಲ್ಲಿ ರಾಜ್ಯ ಮಟ್ಟದ ಸ್ಕೌಟ್ಸ್ ಗೈಡ್ಸ್‌ಗಳ ಪೂರ್ವಭಾವಿ ಸಿದ್ಧತಾ ಶಿಬಿರ ನಡೆಯಿತು. ರಾಜ್ಯದ ವಿವಿಧ ಜಿಲ್ಲೆಗಳಿಂದ 400 ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು. ಸ್ಕೌಟ್ ವಿಭಾಗದ ನಾಯಕರಾಗಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಗೈಡ್ ವಿಭಾಗಕ್ಕೆ ಶ್ರೀಮತಿ ಸರೋಜ ನಾಯಕಿಯಾಗಿದ್ದರು.

ಉದ್ಘಾಟನೆ : ದಿನಾಂಕ 12-11-2007 ರಂದು ಸಂಜೆ ಶ್ರೀ ಜಂಬಗಿ ಶರಣಪ್ಪ, ಜಿಲ್ಲಾ ಮುಖ್ಯ ಆಯುಕ್ತರು, ದಾವಣಗೆರೆ ಇವರ ಅಧ್ಯಕ್ಷತೆಯಲ್ಲಿ ಶ್ರೀ ಮಹಮದ್ ಜಹೀರುದ್ದೀನ್, ರಾಜ್ಯ ಆಯುಕ್ತರು (ಸ್ಕೌಟ್ಸ್) ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಶಿಬಿರವನ್ನು ಉದ್ಘಾಟಿಸಿದರು. ಅವರು ಮಾತನಾಡುತ್ತಾ ಕೊಂಡಜ್ಜಿ ಬಸಪ್ಪನವರು ಸಂಸ್ಥೆಗೆ ಮಾಡಿರುವ ಸೇವೆ ಹಾಗೂ ವ್ಯಕ್ತಿತ್ವದ ಬಗ್ಗೆ ಪ್ರಶಂಸಿಸಿದರು ಹಾಗೂ ರಾಜ್ಯದ ಪುರಸ್ಕಾರ, ರಾಷ್ಟ್ರಪತಿ ಸ್ಕೌಟ್ಸ್ - ಗೈಡ್ಸ್ ಪದಕವನ್ನು ಎಲ್ಲ ಅಭ್ಯರ್ಥಿಗಳುಪಡೆಯಲೆಂದು ಆಶಿಸಿದರು.

ಶ್ರೀಮತಿ ಸರೋಜಮ್ಮ ಮಹಂತೇಶ್, ಜಿಲ್ಲಾ ಪಂಚಾಯತ್ ಸದಸ್ಯರು, ಕೊಂಡಜ್ಜಿ, ಶ್ರೀಮತಿ ಸೌಭಾಗ್ಯಮ್ಮ ಮುದೇಗೌಡಪ್ಪ, ತಾಲ್ಲೂಕು ಪಂಚಾಯತ್ ಸದಸ್ಯರು, ಕೊಂಡಜ್ಜಿ. ಶ್ರೀ ಮಹಮದ್ ವಾಸಿಲ್, ಕೇಂದ್ರ ಸ್ಥಾನಿಕ ಆಯುಕ್ತರು (ಕಾರ್ಯಕ್ರಮ), ಶ್ರೀ ಎಂ.ಎ. ಚೆಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು (ಪ್ರಕಟಣೆ) ಇವರುಗಳು ಅತಿಥಿಗಳಾಗಿ ಆಗಮಿಸಿ ಮಕ್ಕಳನ್ನುದ್ದೇಶಿಸಿ ಮಾತನಾಡಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

## ಕೊಂಡಜ್ಜಿ ಬಸಪ್ಪನವರ ಇಪ್ಪತ್ತೈದನೇ ವಾರ್ಷಿಕ ಸ್ಮರಣೆ ಹಾಗೂ ಸರ್ವಧರ್ಮ ಪ್ರಾರ್ಥನೆ

ದಿನಾಂಕ : 14-11-2007 ರಂದು ಬೆಳಗ್ಗೆ 9.00 ಘಂಟೆಗೆ ಶ್ರೀ ಗೊ.ರು. ಚನ್ನಬಸಪ್ಪ, ಅಧ್ಯಕ್ಷರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಪ್ರಕಟಣಾ ಸಮಿತಿ ಅಧ್ಯಕ್ಷರು, ಇವರ ಅಧ್ಯಕ್ಷತೆಯಲ್ಲಿ 'ಸರ್ವಧರ್ಮ ಪ್ರಾರ್ಥನೆ' ಜರುಗಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಕೊಂಡಜ್ಜಿ ಗ್ರಾಮದ ನಾಗರೀಕರು, ಕೊಂಡಜ್ಜಿ ಬಸಪ್ಪನವರ ಕುಟುಂಬ ವರ್ಗದವರು, ರಾಜ್ಯ ಸಂಸ್ಥೆ ಪದಾಧಿಕಾರಿಗಳು, ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ದಳ ನಾಯಕರುಗಳು ಈ ಪ್ರಾರ್ಥನಾ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದು ಯಶಸ್ವಿಗೊಳಿಸಿದರು.

## 'ಕೊಂಡಜ್ಜಿ ಬಸಪ್ಪ' ಕೃತಿ ಎರಡನೇ ಆವೃತ್ತಿ ಬಿಡುಗಡೆ

ಕೊಂಡಜ್ಜಿ ಬಸಪ್ಪ ಅವರ ಪುಣ್ಯ ಸ್ಮರಣೆ ಕಾರ್ಯಕ್ರಮದ ಅಂಗವಾಗಿ ಶ್ರೀ ಮುದೇನೂರು ಸಂಗಣ್ಣ ರಚಿಸಿರುವ "ಕೊಂಡಜ್ಜಿ ಬಸಪ್ಪ" ಕೃತಿಯ ಎರಡನೇ ಆವೃತ್ತಿಯನ್ನು ಅಖಿಲ ಭಾರತ ಶರಣ ಸಾಹಿತ್ಯ

ಪರಿಷತ್ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ಬಿಡುಗಡೆ ಮಾಡಿದರು. ಅವರು ಮಾತನಾಡುತ್ತಾ ಮಕ್ಕಳಲ್ಲಿನ ಮುಗ್ಧತೆಯನ್ನು ಹೊಂದಿದ್ದ ಬಸಪ್ಪನವರು ಸಮಯ ಪ್ರಜ್ಞೆಯ ಪ್ರತೀಕವಾಗಿದ್ದರು. ಅವರಲ್ಲಿನ ಶಿಸ್ತು, ಸರಳತೆ. ಪ್ರಾಮಾಣಿಕತೆ ನಿಸ್ವಾರ್ಥತೆಯನ್ನು ವಿದ್ಯಾರ್ಥಿಗಳು ಮೈಗೂಡಿಸಿಕೊಳ್ಳಬೇಕು. ಇಂದು ಮಕ್ಕಳ ದಿನಾಚರಣೆ ಕೂಡ ಪಂಡಿತ್ ಜವಾಹರ್‌ಲಾಲ್ ನೆಹರೂರವರ ಆದರ್ಶಗಳನ್ನು ಯುವಕರು, ಪಾಲಿಸಬೇಕೆಂದು ಆಶಿಸಿದರು. "ಕೊಂಡಜ್ಜಿ ಬಸಪ್ಪ" ಕೃತಿ ಬಸಪ್ಪನವರ ಹುಟ್ಟಿನಿಂದ ಕೇಂದ್ರ ಮಂತ್ರಿಯಾದ ಕ್ಷಣದವರೆಗಿನ ನೋವು ನಲಿವುಗಳ ಸಂಪೂರ್ಣ ವಿವರ ಒಳಗೊಂಡಿದೆ. ಕೃತಿ ಅಧ್ಯಯನದ ಮೂಲಕ ಅವರ ಆದರ್ಶಗಳನ್ನು ರೂಢಿಸಿಕೊಳ್ಳಬೇಕೆಂದು ಸ್ಕೌಟ್ಸ್-ಗೈಡ್ಸ್‌ಗಳಿಗೆ ಹಾಗೂ ಯುವ ಜನಾಂಗಕ್ಕೆ ಕರೆ ನೀಡಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಪ್ರಾರಂಭದಲ್ಲಿ ಎಲ್ಲರನ್ನು ಸ್ವಾಗತಿಸಿ ರಾಜ್ಯದ ಪ್ರತಿ ಶಾಲೆಗಳಲ್ಲಿಯೂ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳು ಪ್ರಾರಂಭವಾಗಬೇಕು. ಮಕ್ಕಳನ್ನು ಈ ಚಳುವಳಿಯಲ್ಲಿ ತೊಡಗಿಸಿ ಶಿಸ್ತು, ಶಾಂತಿ, ಸಹಬಾಳ್ವೆ ಹಾಗೂ ಉತ್ತಮ ಮೌಲ್ಯಗಳನ್ನು ರೂಢಿಸುವ ಕಾರ್ಯ ರಾಜ್ಯದ 10 ಸಾವಿರ ಸ್ಕೌಟ್ಸ್-ಗೈಡ್ ಶಿಕ್ಷಕರು ಮೂಲಕ ಆಗಬೇಕಾಗಿದೆ ಎಂದರು.

ವಾರ್ತಾ ಮತ್ತು ಪ್ರಚಾರ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕ ಶ್ರೀ ಕನುಮಪ್ಪ, ಗ್ರಾಮ ಪಂಚಾಯತ್ ಅಧ್ಯಕ್ಷ ಶ್ರೀ ಓ. ವೀರಭದ್ರಪ್ಪ, ಶ್ರೀ ಬಸವಂತಪ್ಪ, ಶ್ರೀ ಕೆ. ಉಮಾಪತಿ, ಶ್ರೀ ಕರೂರು ಬಸವರಾಜಪ್ಪ ಹಾಗೂ ಕೊಂಡಜ್ಜಿ ಗ್ರಾಮದ ನಾಗರೀಕರು ಹಾಗೂ ಕೊಂಡಜ್ಜಿ ಬಸಪ್ಪನವರು ಕುಟುಂಬ ವರ್ಗದವರು ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ನೂತನ ಗ್ರಂಥಾಲಯ ಕೊಠಡಿಗಳ ಉದ್ಘಾಟನೆ

ಡಾ॥ ವೈ. ನಾಗಪ್ಪ, ಮಾನ್ಯ ಮಾಜಿ ಸಚಿವರು ಹಾಗೂ ಶಾಸಕರು, ಹರಿಹರ ಇವರ 2006-07ನೇ ಸಾಲಿನ ಸ್ಥಳೀಯ ಪ್ರದೇಶ ಅಭಿವೃದ್ಧಿ ಯೋಜನೆಯಡಿ ನಿರ್ಮಿಸಲಾದ ನೂತನ ಗ್ರಂಥಾಲಯ ಕೊಠಡಿಗಳ ಉದ್ಘಾಟನೆಯನ್ನು ಸನ್ಮಾನ್ಯ ಡಾ॥ ವೈ. ನಾಗಪ್ಪನವರು ದಿನಾಂಕ 14-11-2007 ರಂದು ಉದ್ಘಾಟಿಸಿದರು.

## ಮುಕ್ತಾಯ ಸಮಾರಂಭ

ದಿನಾಂಕ 14-11-2007 ರಂದು ಸಂಜೆ 4.00 ಘಂಟೆಗೆ ಡಾ॥ ವೈ. ನಾಗಪ್ಪ, ಮಾನ್ಯ ಮಾಜಿ ಸಚಿವರು ಹಾಗೂ ಶಾಸಕರು ಹರಿಹರ ಇವರ ಅಧ್ಯಕ್ಷತೆಯಲ್ಲಿ ಶಿಬಿರದ ಮುಕ್ತಾಯ ಸಮಾರಂಭ ಜರುಗಿತು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಎಲ್ಲರನ್ನು ಸ್ವಾಗತಿಸಿ ಶಿಬಿರದಲ್ಲಿ ಜರುಗಿರುವ ಅಭಿವೃದ್ಧಿ ಕಾರ್ಯಗಳ ಬಗ್ಗೆ ವಿವರಿಸಿದರು. ಡಾ॥ ವೈ. ನಾಗಪ್ಪನವರು ಮಾತನಾಡುತ್ತಾ ವೈದ್ಯಕೀಯ ಕ್ಷೇತ್ರದಿಂದ ನನ್ನನ್ನು ರಾಜಕೀಯ ಕ್ಷೇತ್ರಕ್ಕೆ ತಂದು ಶಾಸಕನಾಗು ಎಂದು ಹಾರೈಸಿದ ಧೀಮಂತ ವ್ಯಕ್ತಿ "ಕೊಂಡಜ್ಜಿ ಬಸಪ್ಪ". ಅವರ ಆಶಯದಂತೆ ಇಂದು ಶಾಸಕನಾಗಿದ್ದೇನೆ ಎಂದು ನೆನಪು ಮಾಡಿಕೊಂಡರು.

ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಉತ್ತಮ ನಾಗರಿಕರಾಗಬೇಕು. ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಪದಕ ಪಡೆಯಬೇಕು. ಬಾಲ್ಯದಲ್ಲಿ ತಾವು ಕೂಡ ಸ್ಕೌಟ್‌ನಲ್ಲಿದ್ದನ್ನು ನೆನೆದರು.

ಶಿಬಿರದ ನಾಯಕರಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಶಿಬಿರದ ಸಂಕ್ಷಿಪ್ತ ವರದಿಯನ್ನು ಮಂಡಿಸಿದರು. 400 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ರಾಜ್ಯದ ವಿವಿಧ ಜಿಲ್ಲೆಗಳಿಂದ ಶಿಬಿರದಲ್ಲಿ ಭಾಗವಹಿಸಿದ್ದರು. ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಪದಕ ಪಡೆಯಲು ಬೇಕಾದ ವಿಷಯಗಳನ್ನು ಬೋಧಿಸಲಾಯಿತು. ಶ್ರೀಮತಿ ಪಿ.ಸಿ. ಮಂಗಳೂರು, ಎಲ್.ಟಿ.(ಗೈಡ್ಸ್) ಇವರು ಗೈಡ್ ವಿಭಾಗದ ಸಲಹೆಗಾರರಾಗಿದ್ದರು. ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ನಾರಾಯಣಶೆಟ್ಟಿ ಹಾಗೂ ಶ್ರೀಮತಿ ಜಾನಕಿ ವೇಣುಗೋಪಾಲ್ ಇವರುಗಳು ಶಿಬಿರದ ಮೇಲ್ವಿಚಾರಕರಾಗಿದ್ದು. ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಸಹಾಯಕರಾಗಿದ್ದರು. ಶ್ರೀ ನೂರುಲ್ಲಾ, ಎ.ಎಸ್.ಓ.ಸಿ.(ಎಸ್) ಚಿತ್ರದುರ್ಗ ಇವರು ಸಹಾಯಕರಾಗಿದ್ದು, ಪೂರ್ವಭಾವಿ ತರಬೇತಿ ಶಿಬಿರ ಯಶಸ್ವಿಯಾಗಿ ಜರುಗಲು ಸಹಕರಿಸಿದರು.

## *Chacha Nehru and Children's Day*



***The Children's Day was observed at the Preparatory Camp for Rajya Puraskar Scouts & Guides held at Kondajji on 14-11-2007.***

*Jawharlal Nehru's love for children is well - known, and there could not have been a better choice of a day than his Birth Day Celebrated as "Children's Day". He was called Chacha Nehru by his sister's dauhgters. He became Chacha Nehru to the Children of India. Jawaharlal Nehru passed away on May 27, 1964. His birthday, 14th November is Celebrated as Children's Day. Incidentally, Universal Children's Day comes off in November, which was the day when the UN adopted the Charter of Childrens Rights.*



# ಭಕ್ತಿಮಾರ್ಗ

ಗೊ.ರು. ಚನ್ನಬಸಪ್ಪ

ಮಾನವನಲ್ಲಿ ಕಂಡು ಬರುವ ಸಂವೇದನೆಗಳಲ್ಲಿ ಒಂದು ಭಕ್ತಿ. ಈ ಭಕ್ತಿಯನ್ನು ಕೇವಲ ದೈವಶ್ರದ್ಧೆಗಷ್ಟೇ ಸೀಮಿತಗೊಳಿಸಿರುವ ಕಾರಣ, ಮುಕ್ತಿಯ ಕೇವಲ ಮಾರ್ಗ ಎಂದು ಅಲೌಕಿಕಗೊಳಿಸಿರುವ ಕಾರಣ, ಅದು ಇಂದಿನ ವ್ಯಾವಹಾರಿಕ ಜಗತ್ತಿನ ಪ್ರದರ್ಶನ - ಪ್ರಚಾರಗಳ ಅಬ್ಬರದಲ್ಲಿ ಒಂದು ಅಸಂಗತ ವಿಚಾರವೆನಿಸಿದೆ; ಸಲ್ಲದ ನಾಣ್ಯವೆನಿಸಿದೆ.

ಆದರೆ ಭಕ್ತಿಯ ಅರ್ಥ ಮತ್ತು ವ್ಯಾಪ್ತಿ ಹೀಗೆ ಯಾವುದೇ ದೇವರು, ಧರ್ಮ ಅಥವಾ ಅಧ್ಯಾತ್ಮಗಳಿಗೇ ಸೀಮಿತವಾದುದಲ್ಲ. ಭಕ್ತಿ ಎಂದರೆ ಕಣ್ಣುಮುಚ್ಚಿ ಕೈಮುಗಿದು ಧ್ಯಾನ ಮಾಡುವುದಲ್ಲ, ಮಡಿಯುಟ್ಟು ಗುಡಿಗೆ ಹೋಗಿ, ಅಲ್ಲಿರುವ ಮೂರ್ತಿಗೆ ನೀರೆರೆದು, ಹೂ - ಪತ್ರೆಗಳಿಂದ ಪೂಜಿಸಿ, ಹಣ್ಣು - ಕಾಯಿ ನೈವೇದ್ಯ ಮಾಡುವುದಲ್ಲ; ಅನಿಷ್ಟ ನಿವಾರಣೆಗೆಂದೋ, ಅಧಿಕಾರ ಪ್ರಾಪ್ತಿಗೆಂದೋ, ಹೋಮಹವನ ಮಾಡುವುದಲ್ಲ; ಪುಣ್ಯ ಸಂಪಾದನೆಗೆಂದು ತೀರ್ಥಯಾತ್ರೆಗೆ ಹೋಗುವುದಲ್ಲ; ಒಂಟಿಯಾಗಿಯೋ, ಒಟ್ಟಾಗಿಯೋ ಮಾಡುವ ಭಜನೆಯೂ ಅಲ್ಲ.

ಇವೆಲ್ಲ ಬಹಿರಂಗದ ಆಚರಣೆಗಳು; ಸಂಪ್ರದಾಯದ ಶ್ರದ್ಧೆಗಳು; ಕೆಲವು ಸಂದರ್ಭಗಳಲ್ಲಂತೂ ಯುಕ್ತಿಗಳು. ವಾಸ್ತವವಾಗಿ ಭಕ್ತಿ ಎನ್ನುವುದು ಬಹಿರಂಗದ ಆಚರಣೆಯಲ್ಲ; ಅದು ಅಂತರಂಗದ ಶಿಸ್ತು. ಭಕ್ತನ ವಿಶೇಷವೆಂದರೆ ಸಕಲ ಜೀವರಾಶಿಗಳನ್ನೂ ತನ್ನಂತೆ ಭಾವಿಸುವುದು; ಮಾಡುವ ಕರ್ತವ್ಯವನ್ನು ಶ್ರದ್ಧಾ ನಿಷ್ಠೆಗಳಿಂದ ಮಾಡುವುದು; ಅನ್ಯಾಯ ಅಸಂಗತಗಳ ವಿರುದ್ಧ ನಿರ್ದಾಕ್ಷಿಣ್ಯದಿಂದ ನಿಲ್ಲುವುದು. ಭಕ್ತನ ಆಸ್ತಿ - ಅವನ ಆತ್ಮಶಕ್ತಿ; ಅವನು ನಡೆಯುವ ಹಾದಿ - ಸಾತ್ವಿಕ ಹಾದಿ; ಅವನ ಗುರಿಯೆಲ್ಲ ಲೋಕನೆಮ್ಮದಿ.

ಇಂದು ಜಗತ್ತಿನಾದ್ಯಂತ ನಡೆಯುತ್ತಿರುವ ವಿದ್ಯಮಾನಗಳನ್ನು ನಾವೆಲ್ಲ ಗಮನಿಸುತ್ತಿದ್ದೇವೆ. ವಿಶ್ವದ ಯಾವುದೇ ಪ್ರದೇಶ ಅಥವಾ ರಾಷ್ಟ್ರ ನೆಮ್ಮದಿಯಿಂದ ಇದೆ ಎಂದು ಹೇಳುವಂತಿಲ್ಲ. ಇಡೀ ಮಾನವ ಸಮುದಾಯ ಸಂಶಯ ಮತ್ತು ಭಯಗಳ ಸುಳಿಗೆ ಸಿಕ್ಕಿಕೊಂಡಂತಿದೆ. ಈಗ ಎಲ್ಲಿ ನೋಡಿದರೂ ರಾಜಕೀಯ ಅಸ್ಥಿರತೆ, ಜನಾಂಗೀಯ ಕಲಹ, ಶಸ್ತ್ರಾಸ್ತ್ರ ಘರ್ಷಣೆ, ಆರ್ಥಿಕ ಅಭದ್ರತೆ, ಕೌಟುಂಬಿಕ ಛಿದ್ರತೆಗಳ ರುದ್ರತಾಂಡವ ನಡೆದಿರುವುದನ್ನು ಕಾಣುತ್ತೇವೆ. ಜೊತೆಗೆ ನಿಸರ್ಗದ ಮುನಿಸಿನಿಂದ ಈಗ ಪ್ರತಿನಿತ್ಯ ಕಂಡು

ಕೇಳುತ್ತಿರುವ ಪ್ರವಾಹ, ಭೂಕಂಪ, ಬಿರುಗಾಳಿ, ಬರಗಾಲ, ಹಿಮಪಾತ ಸಮುದ್ರಸ್ಫೋಟ - ಇವುಗಳ ಹಾವಳಿ ಬೇರೆ.

ತಜ್ಞರು ವಿಚಾರ ಮಾಡಿರುವಂತೆ ಈ ನಿಸರ್ಗದ ಮುನಿಸಿನಿಂದಾಗುವ ದುಷ್ಪರಿಣಾಮಗಳಿಗಿಂತ ರಾಜಕೀಯ ಅನಿಷ್ಟ, ಜನಾಂಗೀಯ ದ್ವೇಷಸ ಯುದ್ಧ ಮತ್ತು ಭಯೋತ್ಪಾದನೆ, ಮಾದಕ ದ್ರವ್ಯಗಳ ಹಾವಳಿ, ಅಸಂಗತ ಧಾರ್ಮಿಕ ನಂಬಿಕೆಗಳು - ಇವುಗಳಿಂದಾಗುವ ಅನಾಹುತವೇ ಹೆಚ್ಚು ಭೀಕರವಾದುದು.

ಇವುಗಳ ಪರಿವೆಯಿಲ್ಲದೆ ನಾವು ನಾಗರಿಕತೆಯ ಹುಚ್ಚಿನಲ್ಲಿ ಅದರ ಬೆನ್ನು ಹತ್ತಿದ್ದೇವೆ. ಆಧುನಿಕತೆಯ ಅವಸರದಲ್ಲಿ, ಅನುಕರಣೆಯ ಆಕರ್ಷಣೆಯಲ್ಲಿ ನಾವು ಅತ್ಯಂತ ಶಕ್ತಿಯುತವಾದ, ನಮ್ಮೊಳಗೇ ಇರುವ ಭಕ್ತಿಮಾರ್ಗವನ್ನು ಉಪೇಕ್ಷಿಸಿದ್ದೇವೆ. ನಾಗರಿಕತೆ ಬೆಳೆಯಬೇಕೇನೋ ನಿಜ. ಆದರೆ ಅದು ಸಂಸ್ಕೃತಿಯ ನೆಲಗಟ್ಟಿನ ಮೇಲೆ ಬೆಳೆಯಬೇಕು. ಲೆಬರ್ ಎಂಬ ತತ್ತ್ವಜ್ಞಾನಿ ಹೇಳುವಂತೆ *Civilization is based on materealism, but the Culture consists of ideals and values* - ನಾಗರಿಕತೆ ಭೌತಿಕವಸ್ತುಗಳ ಆಧಾರದ ಮೇಲೆ ನಿಂತಿದೆ; ಆದರೆ ಸಂಸ್ಕೃತಿ ಆದರ್ಶ ಮತ್ತು ಮೌಲ್ಯಗಳಿಂದ ತುಂಬಿದೆ.

ನಾಗರಿಕತೆ ಒಂದು ರೀತಿಯಲ್ಲಿ ಯಾವುದೇ ಪ್ರಯತ್ನವಿಲ್ಲದೆ ಬೆಳೆಯಲು ಸಾಧ್ಯವಿದೆ. ಅದೊಂದು ರೀತಿಯ ಅನುಕರಣೆ. ಆದರೆ ಸಂಸ್ಕೃತಿ ಹಾಗಲ್ಲ. ನಾಗರಿಕತೆಯನ್ನು ಬೇಕಾದರೆ ಕೊಂಡು ಅಥವಾ ಸಾಲ ತರಬಹುದೆಂದು ಸಮಾಜ ತಜ್ಞರು ಹೇಳುತ್ತಾರೆ. ಆದರೆ ಸಂಸ್ಕೃತಿಗೆ ಸಾಧನೆ ಬೇಕು. ನಾಗರಿಕತೆ ವ್ಯಕ್ತಿಗಾಗಲೀ ಸಮಾಜಕ್ಕಾಗಲೀ ಎಂದೂ ನೆಮ್ಮದಿ ನೀಡಿಲ್ಲ ಎಂಬುದಕ್ಕೆ ಇತಿಹಾಸದಲ್ಲೆ ಸಾಕಷ್ಟು ನಿದರ್ಶನಗಳಿವೆ. ಆದರೆ ಸಂಸ್ಕೃತಿ ಎಂದೆಂದಿಗೂ ಶಾಂತಿ ಮತ್ತು ನೆಮ್ಮದಿಗಳನ್ನು ರಕ್ಷಿಸಿಕೊಂಡೇ ಬಂದಿದೆ.

ಈ ಸಂಸ್ಕೃತಿಯ ಮೂಲಾಧಾರವೇ ಭಕ್ತಿ. ಅದರ ಮುಖ್ಯ ಆಶಯವೇ ಸಾತ್ವಿಕ ವ್ಯಕ್ತಿ ನಿರ್ಮಾಣ; ಆ ಮೂಲಕ ಸಮರ್ಥ ಸಮಾಜ ನಿರ್ಮಾಣ. ಲೋಕದ ಎಲ್ಲ ಸಮಸ್ಯೆಗಳು ಆರಂಭವಾಗುವುದೇ ವ್ಯಕ್ತಿಯಿಂದ. ವ್ಯಕ್ತಿಯ ಹಾರೈಕೆ - ಹಂಬಲಗಳು, ಕನಸು - ಕಲ್ಪನೆಗಳು, ಬಯಕೆ - ಭರವಸೆಗಳು ಆಘಾತಕ್ಕೆ ಈಡಾದಾಗ, ಅವನ ಉದ್ವೇಗ - ಹತಾಶತೆಗಳ, ಕಣ್ಣೀರು - ನಗೆಗಳು ಅಲಕ್ಷ್ಯಕ್ಕೆ ಒಳಗಾದಾಗ, ಹಾಗೆಯೇ ಅವನ ಅಧಿಕಾರ - ಅಹಂಕಾರಗಳು, ಲಜ್ಜೆ - ನಿರ್ಲಜ್ಜೆಗಳು, ಪ್ರಶಂಸೆ - ಪ್ರತೀಕಾರಗಳು ಅಸಹ್ಯದ ಅಂಚು ಮುಟ್ಟಿದಾಗ ಸಮಾಜದ ಸ್ವಾಸ್ಥ್ಯಕೆಡುತ್ತದೆ.

ಈ ಯಾವ ಅವಾಂತರಕ್ಕೂ ಅವಕಾಶವಿಲ್ಲದಿರಬೇಕಾದರೆ ವ್ಯಕ್ತಿ ಭಕ್ತಿಮಾರ್ಗ ಹಿಡಿಯಬೇಕು. ಭಕ್ತಿ ನಮ್ಮಲ್ಲಿ ಸಂಕಲ್ಪಶಕ್ತಿಯನ್ನು, ಸಮಷ್ಟಿ ದೃಷ್ಟಿಯನ್ನು ಬೆಳೆಸುತ್ತದೆ. ಕಾರ್ಯಶ್ರದ್ಧೆ ಮತ್ತು ಶಾಂತಿ - ಸಹನೆಗಳನ್ನು ಮೈಗೂಡಿಸುತ್ತದೆ. ಭಕ್ತಿ ಅಸಹಾಯಕತೆಯ ಅವಸ್ಥೆಯಲ್ಲ; ಅದು ಜೀವನವಿಶ್ವಾಸ!

✢



ದಾವಣಗೆರೆ ಸಮೀಪದ ಕೊಂಡಜ್ಜಿಯಲ್ಲಿ ಬುಧವಾದ ಕೊಂಡಜ್ಜಿ ಬಸಪ್ಪ ಅವರ ಪುಣ್ಯ ಸ್ಮರಣೆ ಕಾರ್ಯಕ್ರಮದಲ್ಲಿ ಮುದೇನೂರು ಸಂಗಣ್ಣ ರಚಿಸಿರುವ 'ಕೊಂಡಜ್ಜಿ ಬಸಪ್ಪ' ಕೃತಿಯನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಗೊ.ರು. ಚನ್ನಬಸಪ್ಪ ಬಿಡುಗಡೆ ಮಾಡಿದರು. ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತ ಕೊಂಡಜ್ಜಿ ಬ. ಷಣ್ಮುಖಪ್ಪ ಇತರರು ಇದ್ದರು.

ಪ್ರಜಾವಾಣಿ-ದಾವಣಗೆರೆ, ಗುರುವಾರ, 15ನೇ ನವೆಂಬರ್ 2007

# ಸಮಯಪ್ರಜ್ಞೆಯ ಪ್ರತೀಕ 'ಕೊಂಡಜ್ಜಿ ಬಸಪ್ಪ'

## 25ನೇ ಪುಣ್ಯಸ್ಮರಣೆಯಲ್ಲಿ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಗೊ.ರು. ಚನ್ನಬಸಪ್ಪ ಬಣ್ಣನೆ

ದಾವಣಗೆರೆ : 'ಕೊಂಡಜ್ಜಿ ಬಸಪ್ಪ' ಅವರಿಂದ ಪುಟ್ಟ ಹಳ್ಳಿ ಕೊಂಡಜ್ಜಿ ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡಿದೆ. ಈ ಗ್ರಾಮ ಅಂತರ್ ರಾಷ್ಟ್ರೀಯ ಕೇಂದ್ರವಾದರೆ ಆರ್ಥಿಕವಾಗಿಯೂ ಸದೃಢವಾಗುತ್ತದೆ ಎಂದು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಗೊ.ರು. ಚನ್ನಬಸಪ್ಪ ಅಭಿಪ್ರಾಯಪಟ್ಟರು.

ಅವರು ಸಮೀಪದ ಕೊಂಡಜ್ಜಿಯಲ್ಲಿ ಭಾರತ್ ಸ್ಕೌಟ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ಕೊಂಡಜ್ಜಿ ಬಸಪ್ಪ ಅವರ 25ನೇ ಪುಣ್ಯಸ್ಮರಣೆ ಅಂಗವಾಗಿ ಬುಧವಾರ ನಡೆದ ಸರ್ವಧರ್ಮ ಪ್ರಾರ್ಥನೆಯಲ್ಲಿ ಭಾಗವಹಿಸಿ, ನಂತರ ನಡೆದ ಮಕ್ಕಳ ದಿನಾಚರಣೆ ಕಾರ್ಯಕ್ರಮದಲ್ಲಿ ಮುದೇನೂರು ಸಂಗಣ್ಣ ರಚಿಸಿರುವ 'ಕೊಂಡಜ್ಜಿ ಬಸಪ್ಪ' ಕೃತಿ ಬಿಡುಗಡೆ ಮಾಡಿ ಮಾತನಾಡಿದರು.

ಮಕ್ಕಳಲ್ಲಿನ ಮುಗ್ಧತೆಯನ್ನು ಹೊಂದಿದ್ದ ಬಸಪ್ಪ ಅವರು ಸಮಯ ಪ್ರಜ್ಞೆಯ ಪ್ರತೀಕವಾಗಿದ್ದರು. ಅವರಲ್ಲಿನ ಸರಳತೆ, ಶಿಸ್ತು, ಪ್ರಾಮಾಣಿಕತೆ, ನಿಸ್ವಾರ್ಥತೆಯನ್ನು ವಿದ್ಯಾರ್ಥಿಗಳು ಮೈಗೂಡಿಸಿಕೊಳ್ಳಬೇಕು ಎಂದ ಅವರು, ಪುಟ್ಟ ಹಳ್ಳಿಯನ್ನು ರಾಷ್ಟ್ರಮಟ್ಟದಲ್ಲಿ ಗುರುತಿಸುವ ಸಾಧನೆಯನ್ನು ಸ್ಕೌಟ್ಸ್ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಮಾಡಿದ್ದಾರೆ. ಈ ಸಾಧನೆ ಇಡೀ ಗ್ರಾಮವೇ ಹೆಮ್ಮೆಪಡುವ ವಿಚಾರ. ಗ್ರಾಮಸ್ಥರು ಹೆಚ್ಚಿನ ಸಂಖ್ಯೆಯಲ್ಲಿ ಈ ಕಾರ್ಯಕ್ರಮಕ್ಕೆ ಭಾಗವಹಿಸಿದೇ ಇರುವುದು ವಿಷಾದದ ಸಂಗತಿ. ಬಸಪ್ಪ ಅವರ ಸ್ಮರಣೆಯನ್ನು ಸುತ್ತಲಿನ ಗ್ರಾಮಸ್ಥರು ಹಬ್ಬವನ್ನಾಗಿ ಆಚರಿಸಬೇಕು. ಆ ಮೂಲಕ ಅವರ ಕೊಡುಗೆಗಳನ್ನು ಉಳಿಸಿ ಬೆಳೆಸಿದರೆ ಅದು ಅವರಿಗೆ ಸಲ್ಲಿಸಬಹುದಾದ ಗೌರವ. ಗ್ರಾಮಪಂಚಾಯಿತ್ ಅಧ್ಯಕ್ಷರು ಈ ಬಗ್ಗೆ ಜಾಗೃತರಾಗಬೇಕು ಎಂದು ಸಲಹೆ ಮಾಡಿದರು.

'ಕೊಂಡಜ್ಜಿ ಬಸಪ್ಪ' ಕೃತಿ ಬಸಪ್ಪ ಅವರ ಹುಟ್ಟಿನಿಂದ ಕೇಂದ್ರ ಮಂತ್ರಿಯಾದ ಕ್ಷಣದವರೆಗಿನ ನೋವು-ನಲಿವುಗಳ ಮಾಹಿತಿ ಒಳಗೊಂಡಿದೆ. ಕೃತಿ ಅಧ್ಯಯನದ ಮೂಲಕ ಅವರ ಆದರ್ಶಗಳನ್ನು ರೂಢಿಸಿಕೊಳ್ಳಬೇಕು ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು.



ಸರ್ವಧರ್ಮ ಪ್ರಾರ್ಥನೆಯಲ್ಲಿ ಪಾಲ್ಗೊಂಡ ಸ್ಕೌಟ್ಸ್-ಗೈಡ್ಸ್‌ಗಳು

ರಾಜ್ಯದ ಪ್ರತಿ ಶಾಲೆಯಲ್ಲಿಯೂ ಸ್ಕೌಟ್ ಮತ್ತು ಗೈಡ್ಸ್ ಆರಂಭವಾಗಬೇಕು. ಮಕ್ಕಳನ್ನು ಈ ಚಳವಳಿಗಳಲ್ಲಿ ತೊಡಗಿಸಿ ಶಿಸ್ತು, ಶಾಂತಿ, ಸಹಬಾಳ್ವೆ, ಉತ್ತಮ ಮೌಲ್ಯಗಳನ್ನು ರೂಢಿಸುವ ಕಾರ್ಯ ರಾಜ್ಯದ 10 ಸಾವಿರ ಶಿಕ್ಷಕರ ಮೂಲಕ ಆಗಬೇಕಿದೆ ಎಂದು ಕೊಂಡಜ್ಜಿ ಬ. ಷಣ್ಮುಖಪ್ಪ ಸಲಹೆ ಮಾಡಿದರು.

ಬಸಪ್ಪ ಅವರ ಪುತ್ರರಾದ ಡಾ. ಗುರುಮೂರ್ತಿ ಕೊಂಡಜ್ಜಿ, ಮೋಹನ್ ಕೊಂಡಜ್ಜಿ, ಲಿಂಗರಾಜ್ ಕೊಂಡಜ್ಜಿ, ರವಿಕುಮಾರ್ ಕೊಂಡಜ್ಜಿ, ವಿಜಯ್ ಕುಮಾರ್ ಕೊಂಡಜ್ಜಿ, ಕೊಂಡಜ್ಜಿ ಬಸಪ್ಪ ಮೆಮೋರಿಯಲ್ ಟ್ರಸ್ಟ್‌ನ ಸದಸ್ಯರು, ಕೇಂದ್ರ ಸ್ಥಾನಿಕ ಆಯುಕ್ತರಾದ ಮಹಮದ್ ವಾಸಿಲ್ ಮತ್ತು ಎಂ.ಎ. ಚೆಲ್ಲಯ್ಯ, ವಾರ್ತಾ ಮತ್ತು ಪ್ರಚಾರ ಇಲಾಖೆ ಹಿರಿಯ ಸಹಾಯಕ ನಿರ್ದೇಶಕ ಕನುಮಪ್ಪ, ಗ್ರಾಮಪಂಚಾಯಿತ್ ಅಧ್ಯಕ್ಷ ಒ. ವೀರಭದ್ರಪ್ಪ, ಬಸವಂತಪ್ಪ, ಕೆ. ಉಮಾಪತಿ, ಕರೂರು ಬಸವರಾಜಪ್ಪ ಇತರರು ಭಾಗವಹಿಸಿದ್ದರು. ಇದಕ್ಕೂ ಮುನ್ನ ನಡೆದ ಸರ್ವಧರ್ಮ ಪ್ರಾರ್ಥನೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್‌ಗಳು, ಶಿಕ್ಷಕರು ಸ್ಕೌಟ್ ಮತ್ತು ಗೈಡ್ಸ್ ಪದಾಧಿಕಾರಿಗಳು, ಗ್ರಾಮಸ್ಥರು ಭಾಗವಹಿಸಿದ್ದರು.



## *HEARTY CONGRATULATIONS*

*Sri T. Prabhakar, State Treasurer, Bharat Scouts and Guides, Karnataka and Former Chairman, Karnataka State Road Transport Corporation has been elected as the President of Karnataka Chitrakala Parishat, Bangalore. He has served Karnataka Chitrakala Parishat as Vice-President earlier.*

*He is the Vice-President of **"Janodaya"** a well kown Non Governmental Organisation in Karnataka State.*

*We the Members of the Bharat Scouts and Guides, Karnataka convey our Hearty Congratulations on his assuming the Distinguished post of the President of the Karnataka Chitrakala Parishat, Bangalore.*



# ಜಿಲ್ಲಾ ವಾರ್ತೆ

## ರಾಯಚೂರು ಜಿಲ್ಲೆ

ನವ್ವೆಂಬರ್ ಒಂದರಂದು ನಡೆದ 51ನೇ ಕರ್ನಾಟಕ ರಾಜ್ಯೋತ್ಸವದ ಕಾರ್ಯಕ್ರಮವು ರಾಯಚೂರಿನಲ್ಲಿ ಅದ್ದೂರಿಯಾಗಿ ನಡೆಯಿತು. ರಾಯಚೂರಿನ ಕರ್ನಾಟಕ ಸಂಘದಿಂದ ನಾಡದೇವಿಯ ಭಾವಚಿತ್ರದ ಮೆರವಣಿಗೆಯಲ್ಲಿ ನಗರದ ಜಹೀರಾಬಾದ ಪ.ಪೂ. ಕಾಲೇಜ್ ಮತ್ತು ಪ್ರಾಥಮಿಕ ಶಾಲೆ, ಇನ್‌ಫೆಂಟ್ ಜೇಸಸ್, ಹಾಷ್ಮಿಯ ಪ್ರಾಥಮಿಕ ಶಾಲೆ, ಸ. ಪ್ರೌಢ ಶಾಲೆ, ಕೆ.ಇ.ಬಿ., ಬಸವ ವಿದ್ಯಾನಿಕೇತನ ಪ್ರೌಢಶಾಲೆ, ಸ್ಕೌಟ್-ಗೈಡ್ ಮಕ್ಕಳು ಭಾಗವಹಿಸಿದ್ದರು. ಪಥಸಂಚಲನೆಯನ್ನು ವೀಕ್ಷಿಸಿ ಧ್ವಜ ವಂದನೆಯನ್ನು ಸನ್ಮಾನ್ಯ ಶ್ರೀ ಅನೀಸಸಿರಾಜು ಜಿಲ್ಲಾ ಮುಖ್ಯಕಾರ್ಯ ನಿರ್ವಾಹಕ ಅಧಿಕಾರಿ (ಸಿ.ಎಸ್.)ಗಳು ಜಿಲ್ಲಾ ಪಂಚಾಯತಿ ರಾಯಚೂರ ಸ್ವೀಕರಿಸಿದರು.

## ಚಿತ್ರದುರ್ಗ ಜಿಲ್ಲೆ

ದಿನಾಂಕ : 8-9-2007 ರಂದು ಚಿತ್ರದುರ್ಗ ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟ್ಸ್ ಶತಮಾನೋತ್ಸವ ಉದ್ಘಾಟನಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಮಾನ್ಯ ಶಾಸಕರಾದ ಶ್ರೀ ಹೆಚ್. ಆಂಜನೇಯ ಅವರು ಉದ್ಘಾಟನೆ ನೆರವೇರಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಈ ಸಮಾರಂಭದಲ್ಲಿ ಮರ್ಚೆಂಟ್ಸ್ ಸೌಹಾರ್ದ ಸಹಕಾರ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಲಕ್ಷ್ಮೀಕಾಂತ ರೆಡ್ಡಿ, ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ರವಿಕುಮಾರ್, ಕೃಷ್ಣಮೂರ್ತಿ, ರಾಜ್ಯ ಆಯುಕ್ತರು (ಸ್ಕೌಟ್ಸ್) ಆದ ಶ್ರೀ ಸಿ.ಆರ್. ಮೊಹಮ್ಮದ್ ಜಹೀರುದ್ದೀನ್, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷರಾದ ಶ್ರೀ ಎ. ರಾಮದಾಸ್, ತಾಲ್ಲೂಕು ದೈಹಿಕ ಶಿಕ್ಷಣಾಧಿಕಾರಿಗಳು, ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಸುಜಯ ಪ್ರಕಾಶ್, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಹೇಮಂತಿನಿ ಪ್ರಕಾಶ್ ಹಾಗೂ ಜಿಲ್ಲೆಯ ಎಲ್ಲಾ ಪದಾಧಿಕಾರಿಗಳು ಹಾಜರಿದ್ದರು. ಶ್ರೀ ಎಂ.ಆರ್. ನಾರಾಯಣಪ್ಪ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಇವರು ಸ್ವಾಗತಿಸಿದರು. ಶ್ರೀ ಎ.ಜಿ. ವಾರದ, ಜಿಲ್ಲಾ ಕಾರ್ಯದರ್ಶಿ ಇವರು ವಂದನಾರ್ಪಣೆ ನೆರವೇರಿಸಿದರು. ಶ್ರೀಮತಿ ಭುವನೇಶ್ವರಿ, ಸಹಾಯಕ ಜಿಲ್ಲಾ ಆಯುಕ್ತರು (ಗೈಡ್ಸ್) ಹಾಗೂ ಶ್ರೀಮತಿ ಎಂ. ರತ್ನ, ತರಬೇತಿ ಆಯುಕ್ತರು (ಗೈಡ್ಸ್) ಇವರು ಕಾರ್ಯಕ್ರಮ ನಿರೂಪಣೆ ಮಾಡಿದರು.

## ಉತ್ತರ ಕನ್ನಡ ಜಿಲ್ಲೆ

ದಿನಾಂಕ : 7-11-2007 ರಂದು ಮಾರ್ಥೋಮಾ ಶಾಲೆಯ ಸ್ಕೌಟ್ಸ್ ಗೈಡ್ಸ್ ಸಪ್ತಾಹದ ಅಂಗವಾಗಿ ಧ್ವಜ ದಿನವನ್ನು ಆಚರಿಸಲಾಯಿತು. ಪ್ರಾಂಶುಪಾಲರಾದ ಥೊಮಸ್ ಮೆಥ್ಯೂರವರಿಗೆ. ರಾಷ್ಟ್ರಪತಿ ಸ್ಕೌಟ್ ಶ್ರೇಯಸ್ ಮಹಾತಿ ಸ್ಕೌಟ್ಸ್ ಧ್ವಜವನ್ನು ನೀಡಿದರು. ಮುಖ್ಯಾಧ್ಯಾಪಕಿಯರಾದ ಶ್ರೀಮತಿ ರ್‍ಯಾಚಲ್ ಥೊಮಸ್‌ರವರಿಗೆ ರಾಷ್ಟ್ರಪತಿ ಗೈಡ್ ಅಶ್ರಿಫಾ ಧ್ವಜವನ್ನು ನೀಡಿದರು. ಈ ಸಮಾರಂಭದಲ್ಲಿ ಸ್ಕೌಟ್ಸ್ ಮಾಸ್ಟರ್ ಶ್ರೀ ಬಿ.ಡಿ. ಪರ್ನಾಂಡೀಸ್‌ರವರು ಎಲ್ಲರನ್ನೂ ಸ್ವಾಗತಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿಯಾದ ಶ್ರೀ ವಿ.ವಿ. ನಾಯ್ಕ, ಡಿ.ಓ.ಸಿ. ಶ್ರೀ ಎಸ್.ಎಂ. ಲೋಪಿಸ್ ಸ್ಕೌಟ್ಸ್ ಮಾಸ್ಟರ ಶ್ರೀ ನಾಗರಾಜ ಪ್ರಭುರವರು ಹಾಜರಿದ್ದರು. ಈ ಸಪ್ತಾಹವು ದಿನಾಂಕ 7 ರಿಂದ 13ರ ತನಕ ನಡೆಯಲಿದ್ದು ವಿವಿಧ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದೆ.

## ಉಡುಪಿ ಜಿಲ್ಲೆ

### ರಾಷ್ಟ್ರೀಯ ವಿಪತ್ತು ಕಡಿಮೆ ಗೊಳಿಸುವ ದಿನಾಚರಣೆ

ರಾಷ್ಟ್ರೀಯ ವಿಪತ್ತು ಕಡಿಮೆ ಗೊಳಿಸುವ ದಿನಾಚರಣೆಯನ್ನು ದಿನಾಂಕ 12-11-2007 ರಂದು ಸರಕಾರಿ ಸಂಯುಕ್ತ ಪ್ರೌಢ ಶಾಲೆ, ವಳಕಾಡು ಉಡುಪಿ ಇಲ್ಲಿ ಜಿಲ್ಲಾ ಆಡಳಿತ ಉಡುಪಿ, ಗೃಹರಕ್ಷಕದಳ, ಇವರ ನೇತೃತ್ವದಲ್ಲಿ ಅಗ್ನಿಶಾಮಕ ದಳ, ಪೋಲೀಸ್ ಇಲಾಖೆ, ಸಾರ್ವಜನಿಕ ಶಿಕ್ಷಣ ಇಲಾಖೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಎನ್.ಸಿ.ಸಿ. ಇವರುಗಳ ಜಂಟಿ ಆಶ್ರಯದಲ್ಲಿ ಸಂಘಟಿಸಲಾಯಿತು. ಸಮಾರಂಭವು ಪ್ರಭಾರ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಬಾಬು ರಾವ್‌ರವರ ಅಧ್ಯಕ್ಷತೆಯಲ್ಲಿ ಜರುಗಿತು. ಮಣಿಪಾಲ ಡಾ. ಟಿ.ಎಂ.ಎ. ಪೈ ವಿಪತ್ತು ನಿರ್ವಹಣಾ ಕೇಂದ್ರ ಆರ್ಕಿಟೆಕ್ಟ್ ಪ್ರೊ. ಆರ್.ಪಿ. ದೇಶ್‌ಮುಖ್ ವಿಪತ್ತು ಕಡಿಮೆ ಗೊಳಿಸುವ ಬಗ್ಗೆ ಪ್ರಧಾನ ಭಾಷಣ ಮಾಡಿದರು. ಶ್ರೀ ಕೆ. ಆನಂದ, ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಅಶೋಕ್ ಕಾಮತ್ ಮುಖ್ಯೋಪಾಧ್ಯಾಯರು ಅತಿಥಿಗಳಾಗಿ ಭಾಗವಹಿಸಿದ್ದರು. ಡಾ. ಗಣಪತಿ ಭಟ್ ಕಮಾಂಡೆಂಟ್ ಜಿಲ್ಲಾ ಗೃಹ ರಕ್ಷಕ ದಳ ಇವರು ಸ್ವಾಗತಿಸಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವತಿಯಿಂದ ಶ್ರೀ ಪಿ. ರವೀಂದ್ರ ನಾಯಕ್, ಶ್ರೀ ಬಿ.ಜಿ. ವಾರಂಬಳ್ಳಿ ಭಾಗವಹಿಸಿದ್ದರು. ಶ್ರೀ ಕೆ. ಆನಂದ್, ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಮಾಹಿತಿ ಬಿತ್ತಿಪತ್ರವನ್ನು ಗೈಡ್ಸ್ ವಿದ್ಯಾರ್ಥಿನಿಗೆ ನೀಡುವ ಮೂಲಕ ಮೆರವಣಿಗೆಯನ್ನು ಉದ್ಘಾಟಿಸಿದರು. ರಾಷ್ಟ್ರೀಯ ವಿಪತ್ತು ಕಡಿಮೆ ಗೊಳಿಸುವ ಬಗ್ಗೆ ನಡೆದ ಚಿತ್ರ ಸ್ಪರ್ಧೆಯನ್ನು ದಿನಾಂಕ 11-11-2007 ರಂದು ಸಂಘಟಿಸಿದ್ದು ಶ್ರೀ ಚಂದ್ರಶೇಖರ ಹೊಳ್ಳ, ಜಿಲ್ಲಾ ಕಾರ್ಯದರ್ಶಿ ಹಾಗೂ ಸ್ಕೌಟರ್ ಶ್ರೀ ರಮೇಶ್ ಅಂಬಾಡಿ ಸಹಕರಿಸಿದರು.

**ಜಾಂಬೂರಿ ಆನ್ ದಿ ಇನ್‌ಟರ್ನೆಟ್ (Jamboree on the Internet) :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಜಿಲ್ಲಾ ಸಂಸ್ಥೆಯ ವತಿಯಿಂದ *Manipal Insitrute of Computer Education* ಇವರ ಸಹಕಾರದಲ್ಲಿ ಉಡುಪಿಯ ಎಂ.ಐ.ಸಿ.ಇ. ವಿದ್ಯಾ ಸಂಸ್ಥೆಯಲ್ಲಿ ಜಾಂಬೂರಿ ಆನ್ ದಿ ಇನ್‌ಟರ್ನೆಟ್ *(Jamboree on the Internet)* ಕಾರ್ಯಕ್ರಮವನ್ನು ದಿನಾಂಕ : 20-10-2007 ರಂದು ಸಂಘಟಿಸಲಾಯಿತು. ಜಿಲ್ಲಾ ಮುಖ್ಯ ಆಯುಕ್ತರು (ಗೈಡ್ಸ್) ಶ್ರೀಮತಿ ರಾಜಲಕ್ಷ್ಮಿಶೆಟ್ಟಿ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಶೇಖರ ಪೂಜಾರಿ ಭಾಗವಹಿಸಿದ್ದರು.

**ಕರ್ನಾಟಕ ರಾಜ್ಯೋತ್ಸವ ದಿನಾಚರಣೆ :** ಜಿಲ್ಲಾ ಆಡಳಿತ ಉಡುಪಿ ಇವರ ವತಿಯಿಂದ ದಿನಾಂಕ 1-11-2007 ನಡೆದ ಕರ್ನಾಟಕ ರಾಜ್ಯೋತ್ಸವ ದಿನಾಚರಣೆಯ ಅಂಗವಾಗಿ ತಾಲ್ಲೂಕು ಕಛೇರಿ, ಉಡುಪಿ ಇಲ್ಲಿಂದ ಅಜ್ಜರ ಕಾಡು ಜಿಲ್ಲಾ ಕ್ರೀಡಾಂಗಣದವರೆಗೆ ನಡೆದ ಮೆರವಣಿಗೆ ಮತ್ತು ಅಜ್ಜರಕಾಡು ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ ಸ್ಕೌಟ್ಸ್ ಗೈಡ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಯು. ಕಮಲಾಬ್ಯಾ ಪ್ರೌಢಶಾಲೆಯ ಗೈಡ್ಸ್, ಸೈಂಟ್ ಸಿಸಿಲೀಸ್ ಶಾಲೆಯ ಗೈಡ್ಸ್, ಕಿಸ್ಟಿಯನ್ ಪ್ರೌಢ ಶಾಲೆಯ ಗೈಡ್ಸ್, ಸೈಂಟ್ ಮೇರಿಸ್ ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಪಥಸಂಚಲನದಲ್ಲಿ ಭಾಗವಹಿಸಿದ್ದರು. ಕ್ರಿಸ್ಟಿಯನ್ ಶಾಲೆಯ ತಂಡಕ್ಕೆ ತಂಡಕ್ಕೆ ಪ್ರಥಮ ಪ್ರಶಸ್ತಿ ಹಾಗೂ ಸೈಂಟ್ ಸಿಸಿಲೀಸ್ ಗೈಡ್ಸ್ ತಂಡಕ್ಕೆ ದ್ವಿತೀಯ ಪ್ರಶಸ್ತಿಯನ್ನು ಜಿಲ್ಲಾಧಿಕಾರಿ ಶ್ರೀ ವಿ. ಪೊನ್ನುರಾಜ್‌ರವರು ನೀಡಿದರು.

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಾಪನಾ ದಿನಾಚರಣೆ ಮತ್ತು ಧ್ವಜ ದಿನಾಚರಣೆ :** ದಿನಾಂಕ 7-11-2007 ರಂದು ಜಿಲ್ಲಾ ಸಂಸ್ಥೆ ಮತ್ತು ಉಡುಪಿ ಸ್ಥಳೀಯ ಸಂಸ್ಥೆಯ ವತಿಯಿಂದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಾಪನಾ ದಿನಾಚರಣೆ ಮತ್ತು ಧ್ವಜ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ದಯಾನಂದ ಶೆಟ್ಟಿ ಪ್ರಾಂಶುಪಾಲರು ಮಾದವ ಪೈ ಪ್ರಥಮ ದರ್ಜೆ ಕಾಲೇಜು, ಮಣಿಪಾಲ,

ಉಡುಪಿ ಇವರು ಮುಖ್ಯ ಅಥಿತಿಗಳಾಗಿ ಭಾಗವಹಿಸಿದ್ದರು. ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು (ಸ್ಕೌಟ್ಸ್) ಶ್ರೀ ಬಿ.ಜಿ. ವಾರಂಬಳ್ಳಿ ದಿನದ ಮಹತ್ವವನ್ನು ತಿಳಿಸಿ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳಿಗೆ ಧ್ವಜಗಳನ್ನು ವಿತರಿಸಿದರು. ಜಿಲ್ಲಾ ಆಯುಕ್ತರು (ಗೈಡ್ಸ್) ವಿದ್ಯಾರ್ಥಿಗಳಿಗೆ ಶುಭಾಶಯಗಳನ್ನು ತಿಳಿಸಿದರು. ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

**ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್‌ಬುಲ್ಸ್ ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರ :** ಜಿಲ್ಲಾ ಸಂಸ್ಥೆ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಡಯಟ್ ವತಿಯಿಂದ ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್‌ಬುಲ್ಸ್ ಶಿಕ್ಷಕ ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರವನ್ನು ಉಡುಪಿ ಜಿಲ್ಲಾ ಪಂಚಾಯತ್ ಹಿರಿಯ ಪ್ರಾಥಮಿಕ ಶಾಲೆ, ಮರವಂತೆ, ಕುಂದಾಪುರ ಇಲ್ಲಿ ದಿನಾಂಕ 22-10-2007 ರಿಂದ 31-10-2007 ರವರೆಗೆ ಸಂಘಟಿಸಲಾಯಿತು.

ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಎಸ್. ರಾಜು ಪೂಜಾರಿ ಅಧ್ಯಕ್ಷರು ಉಡುಪಿ ಜಿಲ್ಲಾ ಪಂಚಾಯತ್ ಇವರು ವಹಿಸಿದ್ದರು. ತರಬೇತಿ ಶಿಬಿರದ ಉದ್ಘಾಟನೆಯನ್ನು ಜಿಲ್ಲಾ ಪಂಚಾಯತ್ ಸದಸ್ಯರು, ಜಿಲ್ಲಾ ಪಂಚಾಯತ್ ಮಾಜಿ ಉಪಾಧ್ಯಕ್ಷರಾದ ಶ್ರೀಮತಿ ಶಾರದ ಎಂ.ಡಿ. ಬೀಜೂರು ನೆರವೇರಿಸಿದರು. ಈ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಸತೀಶ್ ನಾಯಕ್ ಸದಸ್ಯರು, ಕುಂದಾಪುರ ತಾಲ್ಲೂಕು ಪಂಚಾಯತ್, ನರಸಿಂಹ ಶೆಟ್ಟಿ, ಅಧ್ಯಕ್ಷರು ಮರವಂತೆ ಗ್ರಾಮ ಪಂಚಾಯತ್, ಎಸ್. ವಿಠಲ್ ಶೆಟ್ಟಿ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು ಉಡುಪಿ, ಬಿ. ಸತೀಶ್ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್, ಜಿಲ್ಲಾ ಗೈಡ್ಸ್ ಆಯುಕ್ತರು ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿ, ಸ್ಥಾನೀಯ ಆಯುಕ್ತರಾದ ಶ್ರೀ ಬಿ.ಜಿ. ವಾರಂಬಳ್ಳಿ ಕುಂದಾಪುರ ವಲಯ ದೈಹಿಕ ಶಿಕ್ಷಣ ಸಂಯೋಜಕ ಶ್ರೀ ದತ್ತಾತ್ರೇಯ ನಾಯಕ್ ಭಾಗವಹಿಸಿದ್ದರು.

ಇದೇ ಸಂದರ್ಭದಲ್ಲಿ ಜಿಲ್ಲಾ ಮಟ್ಟದಲ್ಲಿ ಉತ್ತಮ ಶಿಕ್ಷಕ ಪ್ರಶಸ್ತಿ ಪಡೆದಿರುವ ಮರವಂತೆ ಶಾಲೆಯ ಮುಖ್ಯೋಪಾಧ್ಯಾಯರಾದ ಬಿ. ಆನಂದ ಅಡಿಗರವರನ್ನು ಸನ್ಮಾನಿಸಲಾಯಿತು.

**ಸಮಾರೋಪ ಸಮಾರಂಭ :** ಶಿಬಿರದ ಸಮಾರೋಪ ಸಮಾರಂಭವು ಕುಂದಾಪುರ ತಾಲ್ಲೂಕು ಪಂಚಾಯಿತ್ ಅಧ್ಯಕ್ಷರು ಹಾಗೂ ಬೈಂದೂರು ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ರಾಜು ದೇವಾಡಿಗರವರ ಅಧ್ಯಕ್ಷತೆಯಲ್ಲಿ ಜರುಗಿತು. ಬೈಂದೂರು ಕ್ಷೇತ್ರದ ಶಾಸಕ ಕೆ. ಗೋಪಾಲ ಪೂಜಾರಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯ ಪ್ರಾಂಶುಪಾಲ ರತ್ನಕುಮಾರ್ ಸಮಾರೋಪ ಭಾಷಣ ಮಾಡಿದರು. ಸ್ಕೌಟ್ಸ್ ಸಹ ಜಿಲ್ಲಾ ಆಯುಕ್ತರು ಮರವಂತೆ ಗ್ರಾಮ ಪಂಚಾಯತ್‌ನ ಮಾಜಿ ಅಧ್ಯಕ್ಷರು ಎಸ್. ಜನಾರ್ಧನ್, ಮರವಂತೆ ಶ್ರೀ ದುರ್ಗಾಯಕ್ಷೇಶ್ವರಿ ದೇವಸ್ಥಾನದ ಧರ್ಮದರ್ಶಿ ಎಂ. ಜಗದೀಶ್ ಅವಬ್ರತ, ಶಾಲಾ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಶ್ರೀಧರ ಪ್ರಸಾದ್, ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಸಿಸ್ಟರ್ ಬಿಬಿಯಾನಾ ಕ್ರಿಸ್ಟಿಯಾನಾ ಡೇಸಾ, ಶ್ರೀ ರಾಮರಾವ್, ಶ್ರೀಮತಿ ಜಯಶ್ರೀ, ಶ್ರೀ ಕೊಗ್ಗ ಗಾಣಿಗ ನಾಯಕರಾಗಿ ಕರ್ತವ್ಯ ನಿರ್ವಹಿಸಿದ್ದರು. ಒಟ್ಟು 100 ಶಿಕ್ಷಕ ಶಿಕ್ಷಕಿಯರು ಈ ತರಬೇತಿಯಲ್ಲಿ ಭಾಗವಹಿಸಿದ್ದರು.

## ದಕ್ಷಿಣ ಕನ್ನಡ ಜಿಲ್ಲೆ

ದಿನಾಂಕ 1-11-2007 ರಾಜ್ಯೋತ್ಸವ ದಿನದಂದು ಮಧ್ಯಾಹ್ನ 2.00 ಗಂಟೆಗೆ ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್, ಕಬ್, ಬುಲ್‌ಬುಲ್‌ಗಳ ರಾಜ್ಯ ಪುರಸ್ಕಾರ, ಚತುರ್ಥ ಚರಣ, ಹಾಗೂ ಗೋಲ್ಡನ್ ಎರೋ, ಪ್ರಶಸ್ತಿ ಪ್ರದಾನ ಸಮಾರಂಭವು ಜರುಗಿತು. ಅತಿಥಿಗಳನ್ನು ಶ್ರೀ ಐ.ಎ. ಕೈರನ್ನ, ಜಿಲ್ಲಾ ಮುಖ್ಯ ಆಯುಕ್ತರು ಸ್ವಾಗತಿಸಿದರು. ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಕಾರ್ಯದರ್ಶಿ ಧನ್ಯವಾದ ನೀಡಿದರು, ಸ್ಕೌಟರ್ ಶ್ರೀ ಸಂಜೀವ ಕಾರ್ಯಕ್ರಮ ನಿರ್ವಹಿಸಿದರು.

## Bangalore South

Udaya Scout Troop and Gayatri Guide Company (open units) paid an Inter State visit to Delhi and Rajasthan

7 Scouts and 10 Guides participated with the theme of **Image and visibility of scouting and guiding in Karnataka to commemorate the centenary year.** The participants reported to the Headquarter Commissioner at NHQ on 13-10-2007. On the the same day they had a lamp fire in which scouts and guides of Rajadhani Troop along with a leader participated. Cultural programmes were given and Mr. M.R. Sing leader chaired the event. The scouts and guides particiapted in **Jota-Joti** at NHQ. 300 scouts and guides assembled. Karnataka team headed by Nayan J. Rawal got 3rd place in quiz. Bharati J. Rawal got 2nd place in Essay Writing and K. Jyothi got 1st place in painting.

On the Occasion of Navarathri they visited Jaipur, Where they participated in the function, which was organized by Deewanji of Jaipur.

## ಗುಲ್ಬರ್ಗಾ ಜಿಲ್ಲೆ

**ವಿಶ್ವ ಸ್ಕೌಟ್ಸ್ ಶತಮಾನೋತ್ಸವ ದಿನಾಚರಣೆ :** ದಿನಾಂಕ - 25-8-2007 ರಂದು ಶನಿವಾರ ಗುಲ್ಬರ್ಗಾದಲ್ಲಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಶ್ರೀ ಸರ್ದಾರ ವಲ್ಲಭಬಾಯಿ ಪಟೇಲ ಸ್ಮಾರಕ ವೆಂಚರ್ಸ್ ಕ್ಲಬ್ ಆಶ್ರಯದಲ್ಲಿ ವಿಶ್ವ ಸ್ಕೌಟ್ಸ್ ಶತಮಾನೋತ್ಸವ ದಿನಾಚಾರಣೆಯನ್ನು ಆಚರಿಸಲಾಯಿತು.

ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಎನ್.ಬಿ. ಪಾಟೀಲ ಅವರು ಕಾರ್ಯಕ್ರಮ ಉದ್ಘಾಟಿಸಿದರು.

ಅಧ್ಯಕ್ಷರಾದ ಶ್ರೀ ಎನ್.ಬಿ. ಪಾಟೀಲ ಹಾಗೂ ಮುಖ್ಯ ಅತಿಥಿ ಶ್ರೀ ನರೇಂದ್ರ ಬಡಶೇಷಿ ವೇದಿಕೆಯ ಮೇಲೆ ಇದ್ದಂತಹ ಗಣ್ಯರು ಶತಮಾನೋತ್ಸವದ ನೂರು ದೀಪಗಳನ್ನು ಬೆಳಗಿಸಿದರು. ನಂತರ ಸ್ಕೌಟ್ಸ್ ಮತ್ತು ಗೈಡ್ಸ್‌ನ ಎಲ್ಲರೂ ಪ್ರತಿಜ್ಞೆಯನ್ನು ಪುನರ್ ಉಚ್ಚರಿಸಿದರು.

ಸ್ಕೌಟ್ಸ್ ಮತ್ತು ಗೈಡ್ಸ್ ಸಲುವಾಗಿ ಸೇವೆ ಸಲ್ಲಿಸಿದ ಗಣ್ಯ ವ್ಯಕ್ತಿಗಳನ್ನು ನೆನೆಸಿಕೊಳ್ಳಲಾಯಿತು ಹಾಗೂ ಅವರಿಗೆ ಸನ್ಮಾನ ಮಾಡಲಾಯಿತು.

ಶತಮಾನೋತ್ಸವ ಅಂಗವಾಗಿ ಸಾಮಾಜಿಕ ಸೇವೆ, ರಕ್ತದಾನ ಶಿಬಿರ, ಶಾಂತಿಯಾತ್ರೆ, ನೈರ್ಮಲ್ಯ, ಸಂಚಾರ ನಿಯಂತ್ರಣ, ನೂರು ಸಸಿಗಳ ನೆಡುವಿಕೆ, ಅಗ್ನಿಶಾಮಕ ಪ್ರಾತ್ಯಕ್ಷಿಕೆಯಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ ಎಂದು ವೆಂಚರ್ಸ್ ಕ್ಲಬ್ ಅಧ್ಯಕ್ಷೆ ಶ್ರೀಮತಿ ಪದ್ಮಪ್ರಿಯಾ ಅವರು ಹೇಳಿದರು.

ಕಾರ್ಯಕ್ರಮದ ನಂತರ ಪಥ ಸಂಚಲನ ನಡೆಯಿತು. ಈ ಪಥ ಸಂಚಲನದಲ್ಲಿ ಬೇಡನ್ ಪೊವೆಲ್, ಲೇಡಿ ಬಿ.ಪಿ., ಮಹಾತ್ಮಾಗಾಂಧಿ, ಡಾ॥ ಬಿ.ಆರ್. ಅಂಬೇಡ್ಕರ್, ಓಬವ್ವ ಮುಂತಾದ ಗಣ್ಯ ವ್ಯಕ್ತಿಗಳ ವೇಷಧರಿಸಿ ಮೆರವಣಿಗೆ ನಡೆಸಲಾಯಿತು. ಈ ಪಥ ಸಂಚಲದಲ್ಲಿ ವಿವಿಧ ಶಾಲೆಗಳಿಂದ 500 ಕ್ಕಿಂತಲೂ ಹೆಚ್ಚು ಮಕ್ಕಳು ಹಾಗೂ ಗಣ್ಯರು ಭಾಗವಹಿಸಿ ಪಥ ಸಂಚಲನ ಯಶಸ್ವಿಗೊಳಿಸಿದರು.

ಈ ಕಾರ್ಯಕ್ರಮವನ್ನು ವೆಂಚರ್ಸ್ ಕ್ಲಬ್‌ನ ಸದಸ್ಯರು ಶ್ರೀ ಸರ್ದಾರ ವಲ್ಲಭಭಾಯಿ ಪಟೇಲ ಸ್ಮಾರಕ ಪ್ರೌಢ ಶಾಲೆ,

ಕೆ.ಜಿ.ಪಿ. ಪ್ರೌಢ ಶಾಲೆ, ಪವನ ಮತ್ತು ವಿವೇಕಾನಂದ ರೋವರ್ಸ್ ಗ್ರೂಪ್, ಆಯುರ್ವೇದ ಮತ್ತು ಪುಷ್ಪಾಂಜಲಿ ಮುಕ್ತದಳದವರು ಸಂಘಟಿಸಿದರು.

## ಗದಗ ಜಿಲ್ಲೆ

ಎಂ.ಬಿ. ಪಾಟೀಲ ರೋವರ್ ಸ್ಕೌಟ್ ಮತ್ತು ಘಟಕ ಕಲಕೇರಿ ಮತ್ತು ಮುಂಡರಗಿಯ ಜೆ.ಎ.ಪಿ.ಯು. ಕಾಲೇಜಿನ ಭೀಮರಾವ್ ಸ್ಕೌಟ್ ಕ್ರ್ಯೂನ ಒಟ್ಟು 19 ರೋವರ್‌ಗಳು ತಿರುಪತಿ ತಿರುಮಲ ದೇವಸ್ಥಾನದಲ್ಲಿ ದಿನಾಂಕ 28-10-2007 ರಿಂದ 4-11-2007ರ ವರೆಗೆ 8 ದಿನ ವಾರದ ಸೇವೆ ಸಲ್ಲಿಸಿ ಪ್ರಮಾಣ ಪತ್ರ ಪಡೆದಿರುತ್ತಾರೆ.

ದೇವಸ್ಥಾನದಲ್ಲಿ ಬೆಳಿಗ್ಗೆ 4-00 ಘಂಟೆಯಿಂದ 8 ಘಂಟೆಯವರೆಗೆ 8 ರಿಂದ 12, 12 ರಿಂದ ಸಾಯಂಕಾಲ 4, ರಿಂದ ಸಾಯಂಕಾಲ 4 ರಿಂದ ರಾತ್ರಿ 8 ರಾತ್ರಿ 8 ರಿಂದ ದಿನದ ಮುಕ್ತಾಯದವರೆಗೆ ಸೇವಾ ಕಾರ್ಯವಿರುತ್ತಿತ್ತು.

ಕಾರ್ಯದ ವಿವರ : ಭಕ್ತರನ್ನು ಸಾಲಾಗಿ ನಿಲ್ಲಿಸುವುದು ಇತ್ಯಾದಿ. ಅಂಗವಿಕಲರು ಮತ್ತು ವಯೋವೃದ್ಧರನ್ನು ಸಾಗಿಸುವುದು. ನೌಕರರ ಕ್ಯಾಂಟೀನಿನನಲ್ಲಿ ಉಪಹಾರ ಮತ್ತು ಊಟವನ್ನು ಬಡಿಸುವುದು. ವರಹಾ ಸ್ವಾಮೀ ದೇವಸ್ಥಾನದಲ್ಲಿ ಭಕ್ತರನ್ನು ಸಾಲಾಗಿ ನಿಲ್ಲಿಸುವುದು ಮತ್ತು ದರ್ಶನಕ್ಕೆ ಅವಕಾಶ ಮಾಡಿಕೊಡುವುದು. ಕ್ಯಾಶ್ ಬ್ಯಾಗ್ ಇತರೆ ಬ್ಯಾಗಗಳನ್ನು ಸ್ಕ್ಯಾನಿಂಗ್ ಮಾಡುವುದು ಇತ್ಯಾದಿ.

## *HEARTY CONGRATULATIONS*



Sri M.A. Khalid, Former State Treasurer, Bharat Scouts and Guides, Karnataka and Senior Administrative Officer of the Government of Karnataka has been elected as the Senior Vice-Chairman of the Asia Pacific Regional Scout Committee in the recently held elections at the Regional Scout Committee, Tokyo, Japan.

This is an unique and prestigious achievement in the annals of Indian Scouting because this is the first time that an Indian Scout has been elected as Vice-Chairman

We the Members of the Bharat Scouts and Guides, Karnataka convey our Hearty Congratulations on his assuming the distinguished position of the Senior Vice-Chairman of the Asia Pacific Regional Scout Committee.

# BALANCE SHEET FOR LIFE

*Our birth is our opening balance! Our death is our closing balance! Our prejudiced views are our Liabilities, our creative ideas are our Assets*

*Heart is our Current Asset, Soul is our Fixed Asset, Brain is our Fixed Deposit, Thinking is our Current Account.*

*Achievements are our Capital, Character & Morals are our stock-in-Trade.*

*Friends are our General Reserves, Values & Behaviour are our Goodwill, Patience is our Interest earned.*

*Love is our Dividend, Children are our Bonus lssues, Education is our Brands/Patents, Knowledge is our Investment, Experience is our Premium Account.*

*The aim is to Tally the Balance sheet accurately. The goal is to get the Best Presented Accounts Award.*

## *WHY WORRY NOW!!*

*Of all the things in the world, there are only two things to worry about*

*Either you are well, or you are sick.*

*If you are well, then there is nothing to worry about; But if you are sick, there are only two things to worry about-whether you will get well or you will die;*

*If you get well, there is nothing to worry about*

*But if you die, there are only two things to worry about: whether you go to heaven or hell*

*If you go to heaven, there is nothing to worry about;*

*And if you go to hell, you will be so busy shaking hands with your old friends, you won't have time to worry there also. so why worry now?*

# Delhi State Bharat Scouts & Guides will host the Special National Jamboree at Burari, Delhi, from 25th to 31st Dec, 2007

*The Details are as follows :*

Place : Special National Jamboree will be held at Jamboree Site Burari, Delhi.

How to reach : Delhi is well connected by Train, Bus and Air from any part of India. Jamboree site 35 k.m. From International & Domestic Airport and within 15 k.m. Distance from all major Railway Stations of Delhi.

Period : The Jamboree will be held from the 25th to 31st December 2007.

Theme : ***One World One Promise.***

Weather : Nights during the jamboree period will be cold. Temperatures range from a mas 11 degrees during the days to a minimum of 3 degrees in the nights. Heavy woolens are required.

Participation : Nearly 22 thousand Scouts and Guides from the entire country and overseas are expected to participate.

Eligibility : Scout & Guide betweem the age of 13 to 17 years and having completed at least Dwitiya Sopan, led by Adult Leaders & affiliated to The Bharat Scout and Guides are eligible.

Programme : Fun Base Activities, Adventure Activities, Intellectual and Self Development Activities, Skill and Service oriented Activities and Integration Game etc.

Places of Interest in and around Delhi : India Gate, Lal Quila, Lotus Temple, Qutab Minar, Rajghat, Jama Masjid, Birla Temple, Humayun's Tomb, Parliament, Rashtrapati Bhavan, Akshardham, Agra, Jaipur, Shimla, Mussorie, Nainital, Kurukshetra, Haridwar etc.

***For More details please Contact the Dist Headquarters.***

(भारत सरकार) GOVERNMENT OF INDIA
(रेल मंत्रालय) MINISTRY OF RAILWAYS
(रेलवे बोर्ड RAILWAY BOARD)

TELEMAX/POST COPY
ISSUED ON 29/10 2007

General Managers (Comml.),

Central Railway, Mumbai.
Eastern Railway, Kolkata.
Northern Railway, New Delhi.
N.E. Railway, Gorakhpur.
N.F. Railway Guwahati.
Southern Railway, Chennai.
S.C.Railway, Secunderabad.
S.E. Railway, Kolkata.
Western Railway, Mumbai.
East Central Railway, Hajipur.
East Coast Railway, Bhubaneswar.
North Western Railway, Jaipur.
North Central Railway, Allahabad.
South East Central Railway, Bilaspur
South Western Railway, Hubli.
West Central Railway, Jabalpur.

No.TCII/2290/82 (.) As per S.No.12 of Annexure to rule 101 of IRCA Coaching Tariff No. 25, Part I (Vol. II), Bharat Scouts & Guides are eligible for 50% concession in Second/Sleeper class fares of normal train services (.) In relaxation of the normal rule, Ministry of Railways have agreed, as a special case to grant **50% concession in second/sleeper class basic fares to Bharat Scouts & Guides by Special Trains/coaches** run under rule 301 & 401 of IRCA Coaching Tariff No. 25, Part I (Vol.I) for the Special Jamboree for the Centenary year of Scouting being held at Delhi during December, 2007 (.) All other charges will be recovered in full as per rules (.) This concession has been granted as a very special case and should not be quoted as a precedent (.) Necessary instructions may be issued (.) This issues with the concurrence of Finance Directorate of this Ministry (.) U. Hazarika/ Railways (.)

U Hazarika
(U.Hazarika)
Director (Passenger Marketing)
Railway Board.

No.TCII/2290/82 New Delhi, dated 29 .10.2007

Copy forwarded for information to:-

1. Dy. Comptroller & Auditor General of India (Railways), Room No. 224, Rail Bhavan, New Delhi with 36 spares.
2. FA&CAOs, All Indian Railways.
3. Principal Director of Audit, All Indian Railways.

DA/36 Spares
with item (1).

For Financial Commissioner/ Railway Board.

No TCII/2290/82 New Delhi, dated 29 10.2007

Shri G.B.S.Sajwan, Director, Bharat Scouts & Guides, Lakshmi Mazumdar Bhawan, 16, M.G. Marg, I.P. Estate, PO Box 7043, New Delhi-110002 with reference to his letter dated 11.9.07.

U Hazarika
(U.Hazarika)
Director (Passenger Marketing)
Railway Board



ಚಿತ್ರದುರ್ಗ ಜಿಲ್ಲಾ ಸಂಸ್ಥೆವತಿಯಿಂದ ಹಮ್ಮಿಕೊಳ್ಳಲಾಗಿದ್ದ ಸ್ಕೌಟ್ ಶತಮಾನೋತ್ಸವವನ್ನು ಮಾನ್ಯ ಶಾಸಕರಾದ ಶ್ರೀ ಎಚ್. ಆಂಜನೇಯರವರು ಉದ್ಘಾಟಿಸಿದರು. ರಾಜ್ಯ ಮುಖ್ಯ ಆಯುಕ್ತರಾದ, ಶ್ರೀ ಕೊಂಡಜ್ಜಿ, ಬ.ಷಣ್ಮುಖಪ್ಪ, ರಾಜ್ಯ ಆಯುಕ್ತರಾದ ಶ್ರೀ ಮಹಮದ್ ಜಹೀರುದ್ದೀನ್ ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ಸ್ಕೌಟ್ ಧ್ವಜ ದಿನಾಚರಣೆಯಂದು ಹೊನ್ನಾವರದ ಮಾರ್ಥೋಮಾ ಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ. ರ್‍ಯಾಚೆಲ್ ಥಾಮಸ್‌ರವರಿಗೆ ಧ್ವಜ ನೀಡುತ್ತಿರುವುದು.



ಬೆಂಗಳೂರು ದಕ್ಷಿಣ ಜಿಲ್ಲೆಯ ಉದಯ ಸ್ಕೌಟ್ ತಂಡ ಮತ್ತು ಗಾಯತ್ರಿ ಗೈಡ್ ತಂಡದ ಸ್ಕೌಟ್ ಗೈಡ್‌ಗಳು ಜೈಪುರದ ದೀವಾನಜೀಯವರೊಂದಿಗೆ ಇರುವುದನ್ನು ಕಾಣಬಹುದು.




ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸಿದ ಕಬ್‌ಗಳು.




ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ಸ್ಥಳೀಯ ಸಂಸ್ಥೆಯ ರಜತ ಮಹೋತ್ಸವ ವರ್ಷ ಹಾಗೂ ವಿಶ್ವ ಸ್ಕೌಟ್ ಶತಮಾನೋತ್ಸವದ ಆಚರಣೆ ಸಂದರ್ಭದಲ್ಲಿ ದೀಪ ಬೆಳಗಿಸುತ್ತಿರುವ ಸ್ಕೌಟ್ ಮತ್ತು ಗೈಡ್‌ಗಳು



# PLACE S OF INTEREST IN DELHI




RASHTRAPATI BHAVAN



AKSHARDHAM



LAL QUILA(RED FORT)



RAJGHAT



100 A Hundred years of Promise 2007
Scouting Celebrates Centenary In 2007

YOUR SUPPORT WILL HELP US TO REACH OUR GOAL



Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: WPP-87 of SSP, BANGALORE WEST
Posted at: Bangalore City H.P.O. on 30-11-2007

ಕರ್ನಾಟಕ ಸ್ಕೌಟ್ ಶತಮಾನೋತ್ಸವ - 2007

ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

*Karnataka Scout & Guide*
News Magazine

**If not delivered please return to :**

EDITOR, Karnataka Scout & Guide
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227



published for : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.